ಸಮಾಜ ಶಿಕ್ಷಣ ಸಾಹಿತ್ಯ ಪ್ರಕಟನೆ ೧.

# ಭಾರತಕ್ಕೆ ಸ್ವರಾಜ್ಯ ದೊರೆತುದೇಕೆ?



ಲೇಖಕರು: ಸಿಂಪಿ ಲಿಂಗಣ್ಣ





ಸಂಪಾದಕರು: ಶಿವಾನಂದ.



ಶ್ರೀ ಶಿವ ಸಂವರ್ಧನ ಪ್ರಕಟನಾಲಯ,
ಗ್ರಾಮ ಹಿಂದ ಸೇವಾ ಸಂಘ, ಗದಗ–ಬೆಟಗೇರಿ.
೧೯೫೨ ಏಪ್ರಿಲ್

# ಇದು ಸಂಘದ ನುಡಿ!



ಜನಸಾಮಾನ್ಯರಲ್ಲಿ ಅಕ್ಷರ ಪ್ರಚಾರವಾಗಲೇಬೇಕಾದ ಕಾಲವಿದು. ಆ ಅನುಕೂಲ ಈಗ ಬಂದಿದೆ.

ಶಾರೀರಿಕ ದಣುವಿನಿಂದ ಹೊಟ್ಟೆ ಹಸಿಯುವಂತೆ, ಅಕ್ಷರಸ್ಥರ ಮನಸ್ಸಿಗೂ ಹಸಿವಾಗುವದು. ಆರೋಗ್ಯಕರವಾದ ವಿಚಾರಗಳು ಹಸಿದ ಮನಸ್ಸಿಗೆ ದೊರೆತರೆ ಕಲಿತ ಅಕ್ಷರಗಳ ಉಪಯೋಗ ಸಾರ್ಥಕವಾಗಿ ವ್ಯಕ್ತಿತ್ವದ ವಿಕಾಸಕ್ಕೆ ಅನುಕೂಲವಾಗುವದು. ನಾಡನ್ನು ಕಟ್ಟುವದರಲ್ಲಿ ಸಾಕ್ಷರಿಗಳ ಶಕ್ತಿ ಹಾಗೂ ಉತ್ಸಾಹಗಳು ತುಂಬಾ ಸಹಕಾರಿಯಾಗುವವು.

ಬಾಳಿನ ಜಟಿಲವಾದ ಸಮಸ್ಯೆಗಳನ್ನು ಆರಂಭದ ಓದುಗರಿಗೆ ಸರಸವಾಗಿ ತಿಳಿಯುವಂತೆ ಆಕರ್ಷಕವಾದ ಶೈಲಿಯಿಂದ ಸುಲಭವಾದ ಮನೆಮಾತಿನ ಭಾಷೆಯಲ್ಲಿ ತಿಳಿಯಪಡಿಸುವದೇ ಸಮಾಜ ಶಿಕ್ಷಣ ಸಾಹಿತ್ಯದ ಪ್ರಕಟನೆಯ ಮೂಲ ಗುರಿ.

ಸಂಘದ ಉತ್ಸಾಹಿ ಕಾರ್ಯಕರ್ತರಿಗೆ ಉಂಟಾಗಿರುವ ಸಮಾಜ ಸೇವೆಯ ಮಹಾ ಹಸಿವೆಯನ್ನು ತಣಿಸುವದರಲ್ಲಿ ಮೊದಲನೆಯ ಪವಿತ್ರ ತುತ್ತನ್ನು ಸಹೋದರ ಶ್ರೀ ಸಿಂಪಿ ಲಿಂಗಣ್ಣನವರು ಕೊಟ್ಟಿದ್ದಾರೆ ತತ್ವೋಪಾಸಕರಾದ ಮಾನ್ಯ ಶ್ರೀ ಎ. ವೆಂಕಪ್ಪ ಶಾಸ್ತ್ರಿಗಳವರು ಸಂಘ ಪ್ರಯತ್ನವನ್ನು ಆಶೀರ್ವದಿಸಿದ್ದಾರೆ. ಶ್ರೀ ಸರಸ್ವತಿದೇವಿಯ ಈ ಮಹಾ ಸೇವೆಯಲ್ಲಿ ಕೈಗೂಡಲು ಕನ್ನಡ ನಾಡಿನ ಅನುಭಾವಿಗಳಾದ ಬರೆಹಗಾರ ಮುಂದೆ ಬಂದಿದ್ದಾರೆ.

ಕನ್ನಡ ಜನತೆಯಲ್ಲಿಯ ಪ್ರೇಮ ಹಾಗೂ ಸಹಕಾರಗಳಲ್ಲಿ ವಿಶ್ವಾ ವಿಟ್ಟು ಸೇವೆಯಲ್ಲಿ ಧುಮುಕಿದ್ದೇವೆ. ಈ ಕಾರ್ಯದಲ್ಲಿ ಗೆ ಜನತೆಯದು. ಕೊರತೆ ಕಾರ್ಯಕರ್ತರದು.

ಸಂಘದ ಸೇವೆಯನ್ನು ಸ್ವೀಕರಿಸಿ ಪ್ರೋತ್ಸಾಹಿಸುವ ಸಕ ಅಂತಃಕರಣಕ್ಕೂ ಕೋಟಿ ಕೋಟಿ ನಮಸ್ಕಾರಗಳು.

ಕಾರ್ಯಕರ್ತರು ಹಾಗೂ ಸಂಪಾ

# ಭಾರತಕ್ಕೆ ಇಲ್ಲದಾದ ಸ್ವರಾಜ್ಯ



ಭಾರತಕ್ಕೆ ಸ್ವರಾಜ್ಯವು ನಾಲ್ಕು ವರುಷಗಳ ಹಿಂದೆ ದೊರೆಯಿತು. ಸ್ವರಾಜ್ಯ ದೊರೆಯಿತು ಎಂದರೆ ಅದನ್ನು ಭಾರತೀಯರು ಗಳಿಸಿಕೊಂಡರೋ ಅಥವಾ ಇಸಗೊಂಡರೋ? ಈ ಪ್ರಶ್ನೆಯನ್ನು ಬಿಡಿಸುವುದೆ ಬಿಗಿ. ಅದರ ಉತ್ತರವೂ ನಮಗೆ ಈಗ ಸಧ್ಯಕ್ಕೆ ಬೇಡ. ಭಾರತಕ್ಕೆ ಸ್ವರಾಜ್ಯವು ದೊರೆತಿದೆ ಇದು ನಿಜ. ಅದು ಹೇಗೆ ದೊರೆಯಿತು, ಎನ್ನುವದಕ್ಕಿಂತಲೂ ಏತಕ್ಕಾಗಿ ದೊರೆಯಿತೆನ್ನುವ ಮಾತು ನಮಗೆ ಹೆಚ್ಚು ಪ್ರಯೋಜನಕರ ವಾಗಿದೆ. ಅದಕ್ಕಾಗಿ ನಾವು ಮೊದಲು, ಭಾರತೀಯರಿಗೆ ಸ್ವರಾಜ್ಯವು ಏತಕ್ಕಾಗಿ ಇಲ್ಲದಾಯಿತು, ಎಂಬ ವಿಚಾರವನ್ನು ಮಾಡುವುದು ಒಳ್ಳೆಯದು.

ರಾಜ್ಯವು ಇಲ್ಲದಾಗುವದೆಂದರೆ, ಅದನ್ನು ಸೋಲುವುದು ಅಥವಾ ಕಳೆದುಕೊಳ್ಳುವದು. ಹೇಡಿಗಳಾದವರಿಗೆ ಸೋಲು ಕಟ್ಟಿಟ್ಟಿರುತ್ತದೆ. ಇಲ್ಲವೆ ಹೆಚ್ಚು ಬಲಶಾಲಿಗಳಾದವರು ಕಡಿಮೆ ಬಲಶಾಲಿಗಳಾದವರನ್ನು ಸೋಲಿಸುತ್ತಾರೆ. ಒಟ್ಟಾರೆ ಭಾರತೀಯರು ಕಡಿಮೆ ಬಲಶಾಲಿಗಳಾಗಿರ ಬೇಕು ಇಲ್ಲವೆ ಹೇಡಿಗಳಾಗಿರಬೇಕು. ಅಂಥ ಪ್ರಸಂಗದಲ್ಲಿ ನಾವು ನಮ್ಮ ಸ್ವರಾಜ್ಯವನ್ನು ಕಳಕೊಂಡೆವು. ಬಲಶಾಲಿಯಾಗಿದ್ದರೂ ಹೆಚ್ಚು ದಣಿದವನನ್ನು ಸಾಮಾನ್ಯ ಬಲಶಾಲಿಯು ಸಹ ಕೆಡಹಿ ಸೋಲಿಸುತ್ತಾನೆ. ಭಾರತವು ಹಾಗೆ ಸ್ವರಾಜ್ಯವನ್ನು ಕಳಕೊಳ್ಳುವ ಹೊತ್ತಿಗೆ ಅದು ಅಪಾರ ವಾದ ಕೆಲಸವನ್ನು ಮಾಡಿ ಮಾಡಿ ದಣಿದಿದ್ದೂ ನಿಜವೇ. “ಕಳೆದ ಮೂರು ಸಾವಿರ ವರುಷ, ಅಥವಾ ಅದಕ್ಕೂ ಹೆಚ್ಚು ಅನ್ನಿರಿ; ಭಾರತವು ಅತಿಯಾಗಿ ದುಡಿಯಿತು. ವಿಶ್ರಾಂತಿಯಿಲ್ಲದೆ ದುಡಿಯಿತು. ಧುರಂಧರಿ ಯಿಂದ ದುಡಿಯಿತು. ಕೊನೆದೋರದ ಅನೇಕ ವಿಧದಲ್ಲಿ ಸೃಷ್ಟಿಕಾರ್ಯ ನಡೆಸಿತು. ಗಣರಾಜ್ಯಗಳನ್ನೂ ಮಂಡಲಗಳನ್ನೂ ಕಟ್ಟಿತು. ರಾಜ ಮಂದಿರ, ದೇವಾಲಯ. ಕೆರೆ ಕಾಲುವೆಗಳನ್ನು ನಿರ್ಮಿಸಿತು. ಧರ್ಮ ಶಾಸ್ತ್ರಗಳನ್ನು ಬರೆಯಿತು. ವ್ಯವಹಾರ ನೀತಿಯನ್ನು ಕಂಡುಹಿಡಿಯಿತು.

ಯೋಗಪದ್ಧತಿಗಳನ್ನು ಹಾಕಿಕೊಟ್ಟಿತು. ವ್ಯಾಪಾರ, ಉದ್ಯೋಗ, ಕುಶಲಕರ್ಮ ಮೊದಲಾದವುಗಳನ್ನು ಸಿದ್ಧಗೊಳಿಸಿತು. ಪಿತ್ತ ತಲೆಗೇರಿದಂತೆ ಕಾರ್ಯೋನ್ಮಾದವು ಕಂಡುಬರುವಂತಿದೆ. ಭಾರತವು ಸೃಷ್ಟಿ ವಿಸ್ತಾರವನ್ನು ಮಾಡಿಯೇ ಮಾಡಿತು. ಅದಕ್ಕೆ ತಣಿವಿಲ್ಲ, ದಣಿವಿಲ್ಲ, ಮುಗಿತಾಯವೂ ಇಲ್ಲ. ಜಡ್ಡು ಜಾಪತ್ತು ಎಂದು ಹಾಸಿಕೊಂಡು ಮಲಗುವುದಕ್ಕೆ ಸಹ ಅದಕ್ಕೆ ಅವಕಾಶ ಸಿಗಲಿಲ್ಲ. ಭರತಖಂಡದ ಸೀಮೆಯನ್ನು ಸಹ ದಾಟಿ ಅದರ ಭಾಗ್ಯದ ಭಾಗೀರಥಿಯು ಹರಿದು ಹೋಯಿತು! ಆ ಕಾಲಕ್ಕೆ ಭಾರತೀಯರು ಮುಟ್ಟಿದ್ದೆಲ್ಲವೂ ಹೊನ್ನಾಗಿ ಬಿಟ್ಟಿತು. ಯುರೋಪದವರು ಆ ಕಾಲವನ್ನು ಕುರಿತು 'ಒಂದು ಖಂಡದಲ್ಲಿ ಇಡಿಯ ಬ್ರಹ್ಮಾಂಡವನ್ನೇ ತುರುಕುವ ಪ್ರವೃತ್ತಿ ಕಂಡು ಬರುವದೆಂದು ಗೊಣಗುವದುಂಟು.'

ಆರೆಂಟು ತಾಸು ದುಡಿದ ಮನುಷ್ಯನು ಅಷ್ಟೇ ಕಾಲದ ವಿಶ್ರಾಂತಿ ಬೇಡುವನಲ್ಲವೇ? ಮೂರು ಸಾವಿರ ವರುಷ ದುಡಿದ ಭಾರತಕ್ಕೆ ಅದೆಷ್ಟು ಕಾಲಾವಧಿಯ ವಿಶ್ರಾಂತಿ ಬೇಕಾದೀತು! ದುಡಿದು ದುಡಿದು ದಣಿದು ಹೆಣನಾಗಿ ಬೀಳುವ ಮನುಷ್ಯನಂತೆ ದುಡಿದುಡಿದು ದಣಿದು ಹೆಣವಾಗಿ ಭಾರತವು ಬಿದ್ದಿರಲಾರದೇ? ದಣಿದ ಹೆಣವನ್ನು ಸತ್ತ ಹೆಣಕ್ಕಿಂತಲೂ ಕಡೆಯೆಂದೆನಿಸಿದಾಗ ಪರಕೀಯರು ಭಾರತವನ್ನು ಸೋಲಿಸಿದರೆ ಆಶ್ಚರ್ಯವಲ್ಲ. ನಿದ್ರೆಗೆಟ್ಟು ಕೊರಡಾಗಿ ಬಿದ್ದವನ ಮೈಮೇಲೆ ಏರಿಹೋಗಿ ತಗಣಿ, ಚಿಕ್ಕಾಡು, ಗುಂಗಾಡುಗಳಂಥ ಕ್ಷುದ್ರ ಜಂತುಗಳು ಸಹ ರಕ್ತ ಹೀರುತ್ತಿರುತ್ತವೆ. ಸೋತು ತಂಗಿದ ಜನಾಂಗವನ್ನು ಕ್ಷುದ್ರರಾದ ದಾಳಿಗಾರರು ಏರಿಬರುವುದು ಸ್ವಾಭಾವಿಕ. ಇದು ಭಾರತದ ಅವನತಿಯೇ ಸರಿ.

**"ಈ ಕಾಲವು ಭಾರತ ಬ್ರಹ್ಮನ ನಿದ್ರಾಕಾಲವಿದ್ದಂತೆ!"**

ನಿದ್ರೆಹೋದವನ ಕಲೆ, ಪಾಂಡಿತ್ಯ, ಚಾಪಲ್ಯ, ಕೆಚ್ಚು ಮೊದಲಾದವುಗಳು ಮರೆಯಾಗಿ ಜೀವ ಮಾತ್ರ ಒಂದು ಉಳಿದುಕೊಂಡ ಲಕ್ಷಣವು ತೋರಿಬರುತ್ತದೆ. ಅದೇ ಪ್ರಕಾರ ನಿದ್ರಾಕಾಲದ ಭಾರತದ ಸರ್ವಸಂಪನ್ನವಾದ ಗುಣಗಳೂ, ಪ್ರಯೋಜನಕರವಾದ ಕಲೆಗಳೂ ಕಳೆಗುಂದಿದವು. ಅದರ ಜೀವಾಳವಾದ ಅಧ್ಯಾತ್ಮ ಮುದ್ರೆಯೊಂದು ಮಾತ್ರ

ಕಳೆಯದೆ ಉಳಿದ ವಸ್ತುವಾಗಿತ್ತು. ಹೀಗೆ ಬಲಗುಂದಿದ ರಾಷ್ಟ್ರವನ್ನು ಹೊರಗಿನವರಾದ ಹೂಣರು, ಶಕರು, ಮಹಮ್ಮದಿಯರು, ಯುರೋಪ ದವರು ಕ್ರಮವಾಗಿ ತಮ್ಮೆಡೆಗೆ ಎಳಕೊಂಡರು. ಇವರೆಲ್ಲರ ತುಳಿಲಾಟ ದಲ್ಲಿ ಭಾರತ ಜನಾಂಗವು ನಿದ್ರೆಯಲ್ಲಿ ಮುಳುಗಿಪ್ಪರೂ ತುರಿಸಿಕೊಂಡಿದೆ, ಒರಸಿಕೊಂಡಿದೆ, ಹೊರಳಿ ಮಲಗಿದೆ, ಮುಸುಕು ಸುತ್ತಿದೆ, ಮುಸುಕು ಕಳೆಚಿದೆ. ಆದರೆ ಭಾರತ ಬ್ರಹ್ಮನ ನಿದ್ರಾಕಾಲವಾದ ದೀರ್ಘರಾತ್ರಿ ಕಳೆದು ಬೆಳಗಾಗುವ ವರೆಗೆ ಅದಕ್ಕೆ ಎಚ್ಚರವೇ ಇರಲಿಲ್ಲ! ಈ ಸ್ಥಿತಿಯಲ್ಲಿ ಭಾರತದ ಕೈಯೊಳಗೆ ಸ್ವರಾಜ್ಯ ಉಳಿಯುವದಾವರೂ ಹೇಗೆ? ಸ್ವರಾಜ್ಯವೇ ಕೈಬಿಟ್ಟು ಹೋದ ಮೇಲೆ ಭಾರತೀಯರ ಸತ್ವವು ಸವೆದುಹೋಯಿತು. ತೇಜವು ತೊಳೆದುಹೋಯಿತು. ಕೆಚ್ಚು ಕಳೆಯಿತು. ಗಳಿಸಿದ ಸಂಪತ್ತು ಕಳಚಿತು. ಸ್ವಾಭಿಮಾನವೂ ಸ್ವಧರ್ಮಾಭಿಮಾನವೂ ತಮಗೆ ಇನ್ನು ಇಲ್ಲಿ ನೆಲೆಯಿಲ್ಲವೆಂದು ಹಾದಿಸಿಕ್ಕ ಕಡೆಗೆ ಓಡಿಹೋದವು.

---

# ಭಾರತದ ಪರಾಧೀನತೆಗೆ ಕಾರಣ



**“ಜ್ಞಾನ, ಪ್ರೇಮ, ಶಕ್ತಿ ಇವುಗಳಿಗೆ ಆಧಾರಳಾದ ಹಾಗೂ ದುರ್ಗಾಮಾತೆಯ ವಿಭೂತಿಯಾದ ಭಾರತ ಭೂಮಿಯು ಇಷ್ಟು ದಿನ ಗಳವರೆಗೆ ಶಕ್ತಿಸಂಗ್ರಹಕ್ಕಾಗಿ ತನ್ನನ್ನು ತಾನು ಮರೆಗೊಳಿಸಿದ್ದಳು”** (ಶ್ರೀ ಅರವಿಂದರ ದುರ್ಗಾ ಸ್ತೋತ್ರ). ಭಾರತವು ಪರಾಧೀನತೆಯಲ್ಲಿ ಇರುವಷ್ಟು ಕಾಲದಲ್ಲೆಲ್ಲ ಅದು ಶಕ್ತಿಯನ್ನು ಸಂಗ್ರಹಿಸಿತೆಂದು ಹೇಳ ಬಹುದಾಗಿದೆ. ಅದು ಶಕ್ತಿಸಂಗ್ರಹಕ್ಕಾಗಿ ಪರಾಧೀನತೆಯನ್ನು ಅಂಗೀ ಕರಿಸಿತು. ಅಂದರೆ ಗೆದ್ದಗೆದ್ದವರಲ್ಲಿರುವ ವಿಶೇಷತರದ ಶಕ್ತಿಗಳನ್ನು ಭಾರತವು ತನ್ನವಾಗಿ ಮಾಡಿಕೊಂಡಿತು. ಅಂಥ ವಿಶೇಷತರದ ಶಕ್ತಿಯು ವಬ್ಬುಗೆಗೆ ಸಿಕ್ಕ ಭಾರತವು ಸತ್ತುಹೋದಂತಾಗಿರಬೇಕು. ಇಲ್ಲವೆ ಅದು ಸತ್ತು ಸತ್ತು ಉಳಿದಂತಾಗಿರಬಹುದು.

"ಕ್ರಿಸ್ತಶಕ ಹದಿನೆಂಟು ಹತ್ತೊಂಬತ್ತನೇ ಶತಮಾನಗಳೆಂದರೆ, ಭಾರತದ ಕರ್ಮವು ವಿಪಾಕಗೊಳ್ಳುವ ಹೊತ್ತು. ಆ ಹೊತ್ತಿನಲ್ಲಿ ಒಂದು ಸಣ್ಣದಾದರೂ ಕೆಟ್ಟಗಳಿಗೆ ಬಂದಿತು. ಅಷ್ಟರಮಟ್ಟಿಗಾದರೂ ಭಾರತದ ಜೀವಕಳೆಯು ಖಂಡಿತವಾಗಿ ನಂದಿಹೋಯಿತೇನೋ ಎನ್ನುವಂಥ ಕೆಡುಗಾಲವು ಬಂದಿತು. ಆಗ ದೇಶದ ದೇಹವು ಸೀಲುಸೀಲಾಗಿ ತುಂಡು ವರಿಯಲಿಕ್ಕೆ ಆರಂಭವಾಯಿತು–" ( ಭಾರತದ ನವಜನ್ಮ ).

ಈ ವಿಷಯವನ್ನು ನಮ್ಮ ಇತಿಹಾಸ ನಿರೀಕ್ಷಣದಿಂದ ಮನದಟ್ಟು ಮಾಡಿಕೊಳ್ಳಬಹುದಾಗಿದೆ. ವೇದಕಾಲದಲ್ಲಿಯೂ ಉಪನಿಷತ್ಕಾಲದಲ್ಲಿಯೂ ಭಾರತದಲ್ಲಿ ಎಣಿಕೆಯಿಲ್ಲದಷ್ಟು ಋಷಿಮುನಿಗಳು ಹುಟ್ಟಿದರು. ಅವರ ಕಾಲದಲ್ಲಿ ಭಾರತೀಯರ ಐಹಿಕ ಜೀವನವೂ ಸಮೃದ್ಧವಾಯಿತು. ಪಾರಲೌಕಿಕ ಜೀವನವೂ ಕಳೆಗೊಂಡಿತು. ಅವರು ಕಟ್ಟಿದ ನಾಲ್ಕು ವರ್ಣಗಳೂ ನಾಲ್ಕು ಆಶ್ರಮಗಳೂ ಐಹಿಕ ಜೀವನದಲ್ಲಿ ತುಂಬಾ ನೆಮ್ಮದಿಯನ್ನು ತಂದವು. ಬರಬರುತ್ತ ಕಟ್ಟಳೆಯ ವರ್ಣಾಶ್ರಮಗಳನ್ನು ಭಾರತೀಯರು ಕಣ್ಣುಮುಚ್ಚಿ ಅನುಸರಿಸಹತ್ತಿದರು. ಅದರಿಂದ ಯಜ್ಞಯಾಗಾದಿಗಳ ಆಡಂಬರವು ಬೆಳೆದು ಬಂದಿತು. ಯಜ್ಞದ ಹೆಸರಿನಿಂದ ಕೊಡಮಾಡುವ ಆಹುತಿಗಳು ಹಿಂಸೆಗೆ ಹೆಚ್ಚು ಉತ್ತೇಜನಕೊಟ್ಟವು. ಯಾವ ವಿಷಯವೂ ಅತಿಯಾಗಬಾರದು. ಅತಿಯಾದಲ್ಲಿ ಬೇಸರವುಂಟಾಗುತ್ತವೆ. ತಿರಸ್ಕಾರವೂ ಕಾಣಿಸಿಕೊಳ್ಳುತ್ತದೆ. ಹಿಂಸಾಚಾರಕ್ಕೆ ಜನರು ಬೇಸತ್ತರು. ಜನಾಂಗಕ್ಕೆ ಹಿಂಸಾಚಾರ ಯಜ್ಞಗಳು ಜೇಡವಾದವು. **"ಅಯ್ಯೋ! ಈ ಅನಾಹುತವು ಹೇಗೆ ತಪ್ಪೀತು?"** ಎಂದು ಜನಾಂಗವು ಕಳವಳಗೊಂಡಿತು.

ರಾಷ್ಟ್ರದ ಆ ಮೊರೆಯು ಜಗನ್ನಿಯಾಮಕಶಕ್ತಿಗೆ ಕೇಳಿಸಿತೇನೋ! ಅಂತೆಯೇ ಜೈನಧರ್ಮವೂ ಬೌದ್ಧಧರ್ಮವೂ ತಲೆದೋರಿದವು. ಅವು ಅಹಿಂಸೆಯನ್ನು ಬೋಧಿಸಿದವು. ಹಿಂಸೆಗೆ ಹೇಸಿದ ಜನಾಂಗವು ಅಹಿಂಸೆಯ ಧರ್ಮಕ್ಕೆ ಸುಲಭವಾಗಿ ಒಲಿಯಿತು. ಹೊಸ ಧರ್ಮಗಳು ಸುಧಾರಕ ಧರ್ಮವೆನಿಸಿಕೊಂಡವು. ಹೊಸ ಬೋಧೆಯ ಮಾರ್ಗವು

ಜನಾಂಗಕ್ಕೆ ಒಪ್ಪಿಗೆಯಾಯಿತು. ಬೌದ್ಧಧರ್ಮವು ಎಲ್ಲೆಲ್ಲಿಯೂ ಪ್ರಸಾರಗೊಳ್ಳತೊಡಗಿತು. ಅದು ಭಾರತವನ್ನೆಲ್ಲ ವ್ಯಾಪಿಸಿತು. ಸಾಲದೆ ಪರದೇಶ–ಪರಖಂಡಗಳಲ್ಲಿಯೂ ಧರ್ಮಪ್ರಸಾರ ಕಾರ್ಯವು ಸಾಗಿತು. ಅದಕ್ಕಾಗಿ ಊರೂರಿಗೆ ಮನೆಮನೆಗೆ ಬೌದ್ಧಭಿಕ್ಷುಗಳು ಕಾಣಿಸಿಕೊಂಡರು. ಗಂಡುಮಕ್ಕಳಂತೆ ಹೆಣ್ಣುಮಕ್ಕಳೂ ಭಿಕ್ಷುಗಳಾಗತೊಡಗಿದರು! ಒಂದು ಬಗೆಯಿಂದ ಧರ್ಮಸ್ವೀಕಾರ ಮಾಡುವವರಿಗಿಂತ ಧರ್ಮಪ್ರಸಾರಕರೇ ಹೆಚ್ಚಾಗಿದ್ದರೆನ್ನಬೇಕು. ಧರ್ಮಪ್ರಸಾರಕರು ಹೆಚ್ಚಾದ ಹಾಗೆ ಸಾಮಾನ್ಯ ಜನರ ಮನಸೆಳೆಯುವ ದೇವಾಲಯಗಳೂ ಮೂರ್ತಿಗಳೂ ಲೆಕ್ಕವಿಲ್ಲದಷ್ಟು ಕಾಣಿಸಿಕೊಂಡವು.

ಪಾರಲೌಕಿಕದ ಒಂದೇ ದೃಷ್ಟಿಯಿಂದ ಸಾಗಿದ ಈ ಪ್ರಯತ್ನದಿಂದ ಜನಾಂಗವು ಐಹಿಕ ಜೀವನವನ್ನು ಅಸಡ್ಡೆ ಮಾಡತೊಡಗಿತು. ರಾಜ್ಯ–ಸಾಮ್ರಾಜ್ಯಗಳ ಬಿಗುಹು ಸಡಿಲಾಗತೊಡಗಿತು. ವ್ಯವಹಾರ ಜೀವನವು ಕುಸಿಯತೊಡಗಿತು. ಆ ಸಂಧಿಯಲ್ಲಿ ಶ್ರೀ ಶಂಕರಾಚಾರ್ಯರು ಜನ್ಮವೆತ್ತಿ ಬಂದರು. ಅವರು ಭಾರತ ಜನಾಂಗದಲ್ಲಿ ಹೊಸದೊಂದು ಜೀವಕಳೆ ತುಂಬಲಿಕ್ಕೆ ನಡುಗಟ್ಟಿದರು. ಅವರು ಅದ್ವೈತವೆಂಬ ಮತವನ್ನು ಬೋಧಿಸತೊಡಗಿದರು. ಬೌದ್ಧಧರ್ಮದವರಂತೆ ವೈದಿಕಧರ್ಮದವರೂ ಗುಡಿಗಳನ್ನು ಕಟ್ಟಿ ಒಳಗೆ ಮೂರ್ತಿಗಳನ್ನು ಸ್ಥಾಪಿಸಬಹುದೆಂದು ಹೇಳಹತ್ತಿದರು ಅದರಿಂದ ಶ್ರೀ ಶಂಕರಾಚಾರ್ಯರು ಬೌದ್ಧಧರ್ಮದ ವಿರುದ್ಧವಾದ ಕೆಲಸವನ್ನು ಮಾಡುತ್ತಿರುವಂತೆ ತೋರಿತು.

ಜನರು ಮೇಲಾಟ ಹೂಡಿದಂತೆ ಊರೂರಿಗೆ ಗುಡಿಗುಂಡಾರಗಳನ್ನು ಅಂದಚಂದವಾಗಿ ಕೊರೆಯಿಸಿದರು. ಮನಸೆಳೆಯುವಂಥ ಮೂರ್ತಿಗಳನ್ನು ಗುಡಿಗಳಲ್ಲಿ ಇರಿಸಿದರು. ಈ ಕ್ರಮವು ತಡೆಯಿಲ್ಲದೆ ಸಾಗಿತು. ದೇವಾಲಯಗಳು, ಮೂರ್ತಿಗಳು, ಅರ್ಚಕರು, ದತ್ತಿಗಳು, ಭಕ್ತರು, ಉತ್ಸವಗಳು, ಸಂತರ್ಪಣಗಳು ಎಣಿಸಲಿಕ್ಕಾಗದಷ್ಟು ಬೆಳೆದುಕೊಂಡವು. ಇದರಿಂದ ಭಕ್ತಭಕ್ತರಲ್ಲಿ ಈರ್ಷೆ ಹುಟ್ಟಿತು! ಸಣಿಸಾಟ ಸೊಕ್ಕಿತು. ಶಿವ–ವಿಷ್ಣುಗಳನ್ನು ಮುಂದೆ ಮಾಡಿ ಶೈವರೂ ವೈಷ್ಣವರೂ

ಕಡಿದಾಡತೊಡಗಿದರು. ಸರಸ್ವತಿಯ ಭಕ್ತರಿಗೂ ಲಕ್ಷ್ಮಿಯ ಭಕ್ತರಿಗೂ ಆಗಿಬರಲೊಲ್ಲದು. ಕದನಗಳು ಮೊದಲು ಮಾತಿನಲ್ಲಿ ಆರಂಭವಾದವು. ಅವು ಕೈ-ಕೈಯಿಂದಲೂ ಕೊನೆಗೊಳ್ಳಲಿಲ್ಲ. ರಾಜರಾಜರಲ್ಲಿ ದಾಳಿ-ಕಾಳಗಗಳು ನಡೆದರೂ ಮುಗಿಯಲಿಲ್ಲ. ಈ ಬಡಿದಾಟ-ಹೊಡೆದಾಟ ಗಳಲ್ಲಿ ಸೋತವರು ನೆಲಹಿಡಿದರು. ಗೆದ್ದವರೂ ಮೆತ್ತಗಾದರು. ಒಂದು ಪಂಗಡದವರು ಇನ್ನೊಂದು ಪಂಗಡದವರ ದೇವಾಲಯಗಳನ್ನೂ ಮೂರ್ತಿ ಗಳನ್ನೂ ಜರಿಯತೊಡಗಿದರು; ನಿಂದಿಸತೊಡಗಿದರು. ಬರಬರುತ್ತ ಪರಪಂಗಡದವರ ಮೂರ್ತಿ ದೇವಾಲಯಗಳನ್ನು ಕೆಡಿಸಿಬಿಡುವ ಬುದ್ಧಿಯು ತಲೆಯೆತ್ತಿತು. ಆ ಕೆಲಸದಲ್ಲಿ ಗೆಲವು ಪಡೆಯುವದಕ್ಕೆ ಬೆಂಬಲವು ಬೇಕೆನಿಸಿತು. ಅದಕ್ಕಾಗಿ ಪರರಿಗೆ ಸಹಾಯ ಬೇಡಬೇಕಾಯಿತು. ಪರರ ಸಹಾಯವೆನ್ನುತ್ತ ಪರಕೀಯರ ಸಹಾಯವೂ ಪರಧರ್ಮದವರ ಸಹಾಯವೂ ಅವಶ್ಯವೆನಿಸಿದವು. ಆಗ ಪರಕೀಯರು ಬೇರೆಯವರೆಂದು ತೋರಲಿಲ್ಲ; ಪರಧರ್ಮದವರೂ ಅನ್ಯಿಗರಾಗಿ ತೋರಲಿಲ್ಲ. ಪರಪಂಗಡ ದವರು ಮಾತ್ರ ತೀರ ಅನ್ಯರೆಂಬ ಭಾವನೆಯು ಬಲಗೊಂಡಿತು. ಪರ ಪಂಗಡದವರ ಮಗ್ಗಲು ಮುರಿಯುವ ಕೆಲಸದಲ್ಲಿ ಪರರು ಸಹಾಯ ಸಲ್ಲಿಸಿದ್ದು ನಿಜ. ಅವರು ಆ ಕೆಲಸವನ್ನು ಮೊದಲು ಮಾಡಿದ್ದೂ ನಿಜ. ಆದರೆ ಅವರು ಸ್ವಪಂಗಡದವರನ್ನು ಸಹ ಹಿಂದುಗಡೆಯಲ್ಲಾದರೂ ಮಣ್ಣುಪಾಲು ಮಾಡಿದರು. ಈ ಕೋಲಾಹಲವನ್ನು ಶಾಂತಗೊಳಿಸುವು ದಕ್ಕೆ ಎರಡೂ ಪಂಗಡಗಳನ್ನು ಜೊಗ್ಗಿಸುವ ಶಕ್ತಿಯೊಂದು ಭಾರತಕ್ಕೆ ಬರಬೇಕಾದುದು ಅನಿವಾರ್ಯವೇ ಆಯಿತು. ಅಳತೆಗೆಟ್ಟ ದೇವ ದೇವಾಲಯಗಳನ್ನು ತೊಡೆದುಬಿಡುವ ಮನೋವೃತ್ತಿಯ ಒಂದು ಪಂಗಡವೂ ಭಾರತದ ಕಡೆಗೆ ಮುಖ ತಿರುಗಿಸಿತು. ಆ ಪಂಗಡವೇ ಮುಹಮ್ಮದಿಯರು.

ಅವರು ಭಾರತೀಯರಿಗೆ ನೆರವು ನೀಡಿದರು. ಎದುರಾಳಿಗಳನ್ನು ಹಣಿದರು. ಕರೆಯಿಸಿದವರನ್ನೂ ಕಣ್ಮರೆಗೊಳಿಸಿದರು. ಗುಡಿಗಳನ್ನು ಕೆಡಹಿದರು. ಮೂರ್ತಿಗಳನ್ನು ಒಡೆದರು. ಸಂಪತ್ತನ್ನು ಸೂರೆ ಮಾಡಿ ದರು. ರಾಜ್ಯಗಳನ್ನು ಗೆದ್ದರು. ಪಟ್ಟವೇರಿದರು. ಭಾರತವನ್ನೂ

ಭಾರತೀಯರನ್ನೂ ಆಳಿದರು. ಆದರೆ ಕೆಲವು ದಾಳಿಗಾರರು ಮಾತ್ರ ಭಾರತದ ಸಂಪತ್ತನ್ನು ಹೇರಿಕೊಂಡು ತಮ್ಮ ದೇಶಕ್ಕೆ ಹೋದರು. ಉಳಿದ ಅರಸರು ಇಲ್ಲಿಯೇ ನೆಲೆಸಿ ನಿಂತರು. ಭಾರತದ ಅಸಂಖ್ಯ ಮತ ಧರ್ಮಗಳಲ್ಲಿ ಮಹಮ್ಮದಿಯರ ಧರ್ಮವೂ ಒಂದು ಎಳೆ ಆಯಿತು. ಮಹಮ್ಮದಿಯರು ಮೊದಲಿಗೆ ಪರಕೀಯರು. ಆಗ ಭಾರತಮೊಡನೆ ಭಾರತದ ರಾಜರೊಡನೆ ಕಲಹವಾಡಿದರು. ಆ ಬಳಿಕ ಭಾರತೀಯರಾಗಿ ಒಳ ಜಗಳಗಳನ್ನು ಹೂಡಿದರು. ಅದರಿಂದ ಭಾರತದ ಶಕ್ತಿಯು ಜರ್ಜರಿತವಾಯಿತು. ಆ ಬಿರುಕಿನಲ್ಲಿ ತೀರ ಬೇರೆತರದ ಜನಾಂಗದವ ರಾದ ಯುರೋಪದವರು ಒಳಸೇರಿದರು.

ಯುರೋಪದವರು ವ್ಯಾಪಾರಕ್ಕೆಂದು ಬಂದವರು. ಆ ನೆವದಿಂದ ಭಾರತದ ಸಂಪತ್ತನ್ನೆಲ್ಲ ಅಪಹರಿಸಿದರು. ಮುದ್ದುಕೊಟ್ಟು ಮೂಗುತಿ ಉಚ್ಚಿಕೊಂಡರು! ಈ ದೇಶವು ರೂಢಿಸಿದ ಬಳಿಕ ಇಲ್ಲಿಯ ಒಳಜಗಳ ಗಳಲ್ಲಿ ಕೈಹಾಕತೊಡಗಿದರು. ಅದರಿಂದ ಭೂಮಿ ಸೀಮೆಗಳನ್ನು ಗಳಿಸಿ ಕೊಂಡರು. ರಾಜ್ಯ ಕಟ್ಟಿದರು; ಆಳಿದರು: ಸಾರ್ವಭೌಮರಾದರು. ಆ ಯುಕ್ತಿಗಾರರ ಬಲೆಯಲ್ಲಿ ರಾಷ್ಟ್ರವು ತೀರ ಕಂಗಾಲವಾಯಿತು. ತೋರಿಕೆಯಲ್ಲಿ ಎಲ್ಲ ಅವಯವಗಳು ಇದ್ದಹಾಗೆ ಇದ್ದವು. ಆದರೆ ಒಳಗಿನ ರಕ್ತವೇ ಸುಡತೊಡಗಿದ್ದಿತು. ಜನಾಂಗವು ಸಂಪೂರ್ಣ ಪರಾಧೀನ ವಾಯಿತು. ಕಲೆಗಳು ಕೈಬಿಟ್ಟವು. ಸತ್ವವು ಶೂನ್ಯವಾಯಿತು. ಧರ್ಮವು ಹಳಸಿತು. ಒಡತನವು ತಲೆಯೆತ್ತಿತು. ಸ್ವಾಭಿಮಾನವೂ ದೇಶಾಭಿಮಾನವೂ ಹೇಳಹೆಸರಿಲ್ಲದಂತೆ ಅಡಗಿಬಿಟ್ಟವು. ಜನಾಂಗದ ಹುಟ್ಟುಗುಣಗಳೆಲ್ಲ ಮಣ್ಣುಪಾಲಾದವು. ಬ್ರಿಟಿಶರ ಕವಡುಗಂಟಕತನ ದಿಂದ ಜಾತೀಯತೆಯು ರೂಪುತಾಳಿತು. ಅದು ಕ್ಷಣಕ್ಷಣಕ್ಕೂ ಭೂತಾ ಕಾರವನ್ನು ತಳೆಯಿತು. ಅದರಿಂದ ಪರಾಧೀನತೆಯೇ ಪರಮ ಸುಖ ವೆಂದು ಭಾವಿಸುವ ಕಾಲ ಬಂದಿತು ತನ್ನ ಬಗ್ಗೆ ತನಗೇ ನಂಬಿಗೆಯಿಲ್ಲ ದಂತಾಯಿತು. ಭಾರತವು ತನ್ನ ಭಾಷೆ, ತನ್ನ ದೇಶ, ತನ್ನ ಧರ್ಮ ಇವುಗಳಲ್ಲಿ ತಿರಸ್ಕಾರವನ್ನು ತಂದುಕೊಂಡಿತು.

---

# ಪರಾಧೀನತೆಯ ಪ್ರಯೋಜನ

**"ಸಂಕಟಗಳು ತಮ್ಮನ್ನು ಗೆಲ್ಲಲೆಂದು ನಮ್ಮ ಮುಂದೆ ಬಂದು ನಿಲ್ಲುತ್ತವೆ"** ಎಂದು ಹೇಳುತ್ತಾರೆ. ಈ ಮಾತು ತೀರ ಸತ್ಯ. ಮೊದಲಿಗೆ ಭಾರತಕ್ಕೆ ಬಂದ ಸಂಕಟವೆಂದರೆ, ಯಜ್ಞಯಾಗಾದಿಗಳು ಹೆಚ್ಚಾದವು. ಅದರಿಂದ ಹಿಂಸಾಚಾರವು ತಲೆಬೇಸರಿಟ್ಟಿತು. ಆಗ ಸುಧಾರಕ ಧರ್ಮಗಳಾದ ಬೌದ್ಧ ಜೈನಧರ್ಮಗಳು ಹುಟ್ಟಿದವು. ಅವು ಭಾರತಕ್ಕೆ ಅಹಿಂಸೆಯ ಸದ್ಗುಣವನ್ನು ಕಲಿಸಿದವು. ಮೂರ್ತಿಪೂಜೆಯಂಥ ಸಾಕಾರ ಧರ್ಮವನ್ನು ಬಳಿಕೆಗೆ ತಂದುಕೊಟ್ಟವು. "ಬೌದ್ಧಮತವೆಂದರೆ ಇಹ ಜೀವಿತಕ್ಕೆ ಏನಾದರೂ ನಿಜವಾದ ಬೆಲೆ ಇರುವದೋ ಎಂಬ ಸಂಶಯವನ್ನು ಉಂಟು ಮಾಡುವಂಥದು. ಅದರ ಚೈತನ್ಯದಿಂದ, ನೀತಿಶಾಸ್ತ್ರದಿಂದ, ಸಾಧನ ಪದ್ಧತಿಯಿಂದ ಮಾನವಜೀವನಕ್ಕೆ ಹೊಸ ತ್ರಾಣ ಬಂದಿತು. ಹೊಸ ಅರ್ಥ ಬಂದಿತು. ಸುಕುಮಾರವಾದ ಆದರ್ಶವಾದಿತ್ವವು ಬಂದಿತು. ಪ್ರಪಂಚವನ್ನು ರೂಪಿಸುವ ಕಲೆಗಳಿಗೂ ವ್ಯವಹಾರ ರಾಜ್ಯಕಾರ್ಯಗಳಿಗೂ ನವಜನ್ಮವೇ ಬಂದಿತು." ಆ ಬಳಿಕ ಬೌದ್ಧ ಧರ್ಮದ ಒಮ್ಮೈ ನಡುವಳಿಕೆಯಿಂದ ಭಾರತವು ಕುಂಟುಬಿದ್ದಿತು. ಆಗಲೇ ಶ್ರೀ ಶಂಕರಾಚಾರ್ಯರ ಅದ್ವೈತರತ್ನವನ್ನು ಭಾರತ ಜನಾಂಗವು ಪಡೆಯಿತು. ಅದರಿಂದುಂಟಾದ ಹೊಸ ಚೈತನ್ಯದಿಂದ ಜನಾಂಗವು ಕಾರ್ಯಮುಖವಾಯಿತು.

"ಅಶೋಕನ ಕಾಲದಿಂದ ಮಹಮ್ಮದಿಯರ ಮನ್ವಂತರದ ವರೆಗೆ ಭರತಖಂಡದಲ್ಲಿ ಗ್ರಂಥರಾಶಿಯೇ ಹುಟ್ಟಿಕೊಂಡಿತು. ಅವುಗಳಲ್ಲಿ ನೂರಕ್ಕೆ ನಾಲ್ಕಾರು ಪಾಲೇ ನಮ್ಮ ಕೈಗೆ ಸಿಕ್ಕುತ್ತವೆ. ಸಿಕ್ಕ ಗ್ರಂಥಗಳಲ್ಲಿ ಕೆಲವೊಂದರ ವಿಮರ್ಶೆಯನ್ನೇ ಇತ್ತೀಚಿನ ಪಂಡಿತರು ಮಾಡಿದ್ದಾರೆ. ಅದನ್ನಷ್ಟೇ ನಿರೀಕ್ಷಿಸಿದರೂ ಇಲ್ಲಿಯ ನಿರ್ಮಾಣ ಶಕ್ತಿಯೇ ಅತ್ಯದ್ಭುತವೆಂದು ಎನಿಸದಿರಲಾರದು." ಶ್ರೀ ಶಂಕರಾಚಾರ್ಯರ ಪ್ರಭಾವವು

ಮಸಣಿಸಿದ್ದರಿಂದ ಜನಾಂಗವು ಮಲೆತುನಿಂತ ನೀರಿನಂತೆ ಮತ್ತೆ ನಾರ ತೊಡಗಿತು. ಶೈವ ವೈಷ್ಣವರಲ್ಲಿ ಮೇಲಾಟವೂ ಕಲಹವೂ ಕಾಣಿಸಿ ಕೊಂಡವು. ಗುಡಿ ಮೂರ್ತಿಗಳು ಪಾಪದ ಫಲಗಳಂತೆ ತೋರತೊಡ ಗಿದವು. ಆಗ ಮಹಮ್ಮದಿಯರು ಬಂದು ಭಾರತರಾಷ್ಟ್ರವನ್ನು ಕೆಣಕಿದರು. ಬೌದ್ಧಧರ್ಮದ ಔಷಧದಿಂದಾಗಲಿ ಶ್ರೀ ಶಂಕರಾಚಾರ್ಯರ ಚುಚ್ಚು ಮದ್ದಿನಿಂದಾಗಲಿ ಭಾರತದ ಜಾಡ್ಯವು ಹಗುರಾಗಲಿಲ್ಲ. ಮಹಮ್ಮದಿಯರ ಆಗಮನವು ಶಸ್ತ್ರಚಿಕಿತ್ಸೆಯಂತೆ ಉಪಚಾರ ನಡೆಯಿಸಿತು. ಅವರ ಆಳಿಕೆಯು ಅನೇಕ ಹೊಸ ಕಲೆಗಳನ್ನು ಹಬ್ಬಿಸಿತು. ಪರಕೀಯರಾಗಿ ಬಂದ ಮಹಮ್ಮದಿಯರನ್ನು ತಡೆಯುವದಕ್ಕೆ ಶೈವರೂ ವೈಷ್ಣವರೂ ತಮ್ಮೊಳಗಿನ ಭೇದವನ್ನು ಮರೆತರು. ತಮ್ಮತಮ್ಮೊಳಗೆ ಒಂದಾದರು. ಆ ಒಕ್ಕಟ್ಟಿನಲ್ಲಿ ಒಂದು ಮಹಾಕೃತಿಯು ಸಾಧಿಸಿತು. ಅಂದರೆ ವಿಜಯ ನಗರದಂಥ ಬಲಾಢ್ಯವಾದ ರಾಜ್ಯವನ್ನು ಕಟ್ಟಿದರು. ಜನರಲ್ಲಿ ಧರ್ಮ ಬುದ್ಧಿಯು ಜಾಗ್ರತಗೊಂಡಿತು. ಅದು ಮಹಮ್ಮದಿಯರನ್ನು ದಕ್ಷಿಣ ದೇಶಕ್ಕೆ ಏರಿಬರದಂತೆ ಕೆಚ್ಚೆದೆಯಿಂದ ತಡೆಗಟ್ಟಿತು.

ಆ ಬಳಿಕ ಯುರೋಪದವರ ಸಂಪರ್ಕವುಂಟಾಯಿತು. ಆಗ ಭಾರತದ ಸರ್ವಶಕ್ತಿಗಳು ರಸಾತಳಕ್ಕಿಳಿದವು. ಅದು ಭಾರತಕ್ಕೆ ಬಂದ ಮಹಾ ಗಂಡಾಂತರ, ಹಾಗೂ ಕೊನೆಯ ಗಂಡಾಂತರ. "ಭಾರತದ ಭಾಗ್ಯಕ್ಕೆ ಬಂದ ಗಂಡಾಂತರದ ಕಾಲದಲ್ಲಿ ಅದರಿಂದಲೇ ಭಾರತದ ಪ್ರಾಣ ಉಳಿಯಿತು. ಅದರ ನವಜನ್ಮವೂ ಆಗಲೇ ಪ್ರಾರಂಭವಾಯಿತು. ಇಂಥ ಭಾರದ ಕೆಳಗೆ ಇನ್ನೊಂದು ರಾಷ್ಟ್ರವು ಸಿಕ್ಕಿದ್ದರೆ ಅದರ ದೇಹ ಆತ್ಮಗಳೆರಡೂ ನುಗ್ಗುನುರಿಯಾಗಿ ಹೋಗಬಹುದಾಗಿತ್ತು. ಹಿಂದುಸ್ತಾನ ದಲ್ಲಿಯಾವರೂ ಇದರ ಹೊಡಪ್ಪೆಯ ಪ್ರತಿ ಅವಯವಗಳೂ ಹುಳತು ಹುಣ್ಣಾಗಿದ್ದವು. ಚೇತರಿಸಿಕೊಂಡು ಏಳುವ ಶಕ್ತಿಗಿಂತ ಮಲೆತು ಮಲ ಗುವ ಮಾಂದ್ಯವೇ ಹೆಚ್ಚಾಗಿದ್ದಿತು. ಮತ್ತು ಮಲೆತಿತೆಂದರೆ ಮರಣ ಬರುವುದು ನಿಶ್ಚಯ! ಹೇಗಾದರೂ ಹಿಂದುಸ್ತಾನವು ಬದುಕಿ ಎಚ್ಚರ ಗೊಂಡಿತು. ಅದರ ದೇಹದಲ್ಲಿ ಎಷ್ಟೇ ಬದಲಾವಣೆಗಳಾದರೂ ಅದು ತನ್ನ ವಿಲಕ್ಷಣವಾದ ಸ್ವತ್ವದ ಸತ್ವವನ್ನು ಕಳೆದುಕೊಳ್ಳಲಿಲ್ಲ."

ಬ್ರಿಟಿಶರ ಆಳಿಕೆಯಲ್ಲಿ ಭಾರತರಾಷ್ಟ್ರವು ತನ್ನ ಸಂಪತ್ತು ಕಳಕೊಂಡಿತು. ಆದರಿಂದ ಅದಕ್ಕೆ ತನ್ನ ಬಡತನದ ಅರಿವು ಬಂದಿತು. ಅದು ಒಂದೇ ಆಳಿಕೆಗೆ ಒಳಪಟ್ಟಿತು. ಅದರಿಂದ ಅದರಲ್ಲಿ ಸ್ವಾತಂತ್ರ್ಯದ ಕಳವಳವು ಕಾಣಿಸಿಕೊಂಡಿತು. ಭಾರತದ ಅಂಗಾಂಗಗಳು ಮಾರ್ಗ, ವಾಹನಸೌಕರ್ಯಗಳ ಬಿಗಿತದಲ್ಲಿ ಹೊರಳಾಡಲು ಬಾರದಂತಾಯಿತು. ಅದರಿಂದ ಅದರಲ್ಲಿ ಒಂದು ದೇಹದ ಭಾಗಗಳೆಂಬ ಸಿದ್ಧಾಂತವು ದೃಢಗೊಂಡಿತು. ಜನಾಂಗವು ಅಸ್ಪೃಶ್ಯತೆಯ ಕೊಳೆಗೆ ನಾಚಿಕೊಂಡಿತು. ಸಹಗಮನಾದಿ ಸಾಮಾಜಿಕ ನೀತಿಗಳು ಹೇಯವೆಂದು ಭಾವಿಸಿಕೊಂಡಿತು. ಜಾತೀಯತೆಯು ಭೂತದಾಟವೆಂದು ಬಗೆಯಿತು. ಒಟ್ಟಾರೆ ಭಾರತವು ತನ್ನಲ್ಲಿರುವ ಕುಂದುಕೊರತೆಗಳಿಗೆ ಹೇಸಿಕೊಂಡಿತು. ಹೇಗೋ ತಿಳಿಗೇಡಿತನದಿಂದ ಒಳಸೇರಿದ ಬೂಟಾಟಿಕೆಗಳನ್ನೆಲ್ಲ ಕಳೆದುಕೊಳ್ಳಲು ನಡುಗಟ್ಟಿತು. ತನ್ನ ಹೀನ ಸ್ಥಿತಿಯನ್ನು ಕಳೆದುಕೊಳ್ಳುವುದಕ್ಕೆ ಉಪಾಯಗಳನ್ನು ಹುಡುಕಿಕೊಳ್ಳಹತ್ತಿತು. ದಾದಾಭಾಯಿ ನವರೋಜಿಯವರು ಭಾರತಕ್ಕೆ ಸ್ವರಾಜ್ಯಮಂತ್ರವನ್ನು ಉಸುರಿದರು. ತಿಲಕರು ಸ್ವರಾಜ್ಯವು ನಮ್ಮ ಜನ್ಮಸಿದ್ಧವಾದ ಹಕ್ಕೆಂದು ಘೋಷಿಸಿದರು. ಭಾರತದ ರಾಜಸವೃತ್ತಿಯನ್ನು ಎಚ್ಚರಿಸುವ ಉಪಾಯವನ್ನು ವಿವೇಕಾನಂದರು ಸೂಚಿಸಿದರು. ಸಾಮ್ರಾಜ್ಯಾಂತರ್ಗತ ಸ್ವರಾಜ್ಯವೊಂದೇ ಹಾದಿಯೆಂದು ಮ. ಗಾಂಧಿಯವರು ತೀರ್ಮಾನಿಸಿದರು. ಸಂಪೂರ್ಣ ಸ್ವಾತಂತ್ರ್ಯವೇ ನಮ್ಮ ಗುರಿಯೆಂದು ಜವಾಹರಲಾಲರು ಆರ್ಭಟಿಸಿದರು. ಸತ್ಯ ಅಹಿಂಸೆಗಳ ದಾರಿಯನ್ನು ಗಾಂಧಿಯವರು ಹುಡುಕಿ ಕೊಟ್ಟರು. ರಾಮಕೃಷ್ಣ ಪರಮಹಂಸರು, ಸರ್ವಧರ್ಮಗಳು ಸತ್ಯವೆಂದು ಸ್ವಾನುಭವದಿಂದ ಬಗೆದು ಜನಾಂಗಕ್ಕೆ ತೋರಿಸಿದರು.

---

# ಭಾರತದ ಆತ್ಮಜಾಗೃತಿ



ಭಾರತದ ಅಂಗಾಂಗಗಳು ಕಳಚಿಕಡೆಗಾಗಿದ್ದವು. ಅದರ ರಕ್ತ ಮಾಂಸಗಳೆಲ್ಲ ಕೊಳೆತು ಹುಳಿತಿದ್ದವು. ಆದರೂ ಅದು ಸತ್ತಿರಲಿಲ್ಲ. ಸತ್ತಂತೆ ಅರಿವು ತಪ್ಪಿ ಬಿದ್ದಿದ್ದಿತು. ಆದರೆ ಅದರ ನೆತ್ತರದ ಗುಂಡಿಯಲ್ಲಿ ಪ್ರಾಣವು ಜೀವ ಹಿಡಿದಿತ್ತು. ಭಾರತದ ಅರ್ಥಸಂಪತ್ತು ಕೈಬಿಟ್ಟಿದ್ದಿತು. ಆದರೆ ಅದರ ಆಧ್ಯಾತ್ಮ ಸಂಪತ್ತು ಮಾತ್ರ ಬೀಜರೂಪದಿಂದ ಬದುಕಿತ್ತು. ಅದು ಪರಾಧೀನತೆಯಲ್ಲಿ ಕಂಗೆಟ್ಟಿತು. ಆದರೂ ಅದರ ಅಂತರಂಗದ ಅರಸನು ಸ್ವಾಧೀನತೆಯನ್ನು ಕಳಕೊಂಡಿರಲಿಲ್ಲ. ಅದರ ಭಾಷೆ, ಸಂಸ್ಕೃತಿ, ಧರ್ಮ (ರೀತಿನಡವಳಿಕೆ) ಮೊದಲಾದವುಗಳು ಮುಸಣಿಸಿದ್ದವು. ಆದರೂ ಅವು ಹೊಸ ಜೀವಗಾಳಿಗೆ ದಾರಿಯನ್ನಿಟ್ಟುಕೊಂಡಿದ್ದವು.

**"ಈ ಸಂದುಕಟ್ಟಿನ ಕಾಲಕ್ಕೆ ಯುರೋಪಿನ ನೆರೆತೆರೆಗಳು ಹಿಂದುಸ್ತಾನವನ್ನು ಬೀಸಿ ಉಡುಗಿದವು. ಈ ಹೊಸದಾದ ಮತ್ತು ತೀರ ವಿರುದ್ಧವಾದ ಸಂಸ್ಕೃತಿಯ ಹೊಯಲಿನಿಂದ ಮೊದಲಿನೇಟಿಗೆ ಬಾಳಲು ಅಸಮರ್ಥವಾಗಿದ್ದ ಹಳೆಯದು ಹಾಳಾಯಿತು. ಉಳಿದುದು ಎಷ್ಟೋ ಕರಗಿತು. ಇನ್ನುಳಿದದ್ದು ಕಳೆಗುಂದಹತ್ತಿತು. ಅದು ಜೀವವನ್ನು ಗಂಡಾಂತರಕ್ಕೀಡುಮಾಡುವ ಅಗ್ನಿಪರೀಕ್ಷೆಯ ಹೊತ್ತು."** ಅಂಥ ಹೊತ್ತಿನಲ್ಲಿ ಭಾರತವು ಇಮ್ಮಡಿ ಭಾರದ ಕೆಳಗೆ ಸಿಕ್ಕು ನುಗ್ಗುನುರಿಯಾಗಿ ನಷ್ಟವೇ ಆಗುತ್ತಿತ್ತು. ಆದರೆ ಭಾರತದ ಪ್ರಾಣಬಲವು ಅದಮ್ಯವಾಗಿತ್ತು. ಆದುದರಿಂದ ಅದು ಪರಕೀಯರ ವಿಚಾರ-ಅಭ್ಯಾಸಗಳ ಹೀನಾದೀನಾನುಕರಣವನ್ನೂ, ಪೂರ್ವದ ರಕ್ತಗತ ಪ್ರವೃತ್ತಿಗಳ ಜೀವಹರಣದಿಂದಾದ ಜಡತೆಯನ್ನೂ, ಸಹಿಸಿಕೊಳ್ಳಲು ಸಾಧ್ಯವಾಯಿತು.

"ಭಾರತದ ದೇಹದಲ್ಲಿ ಸುಪ್ತವಾಗಿದ್ದ ಪ್ರಾಣಶಕ್ತಿಯು ಕೆಲಹೊತ್ತು ಕುತ್ತಕ್ಕೀಡಾಗಿತ್ತು. ಆದರೂ ಅದು ತೀರ ಸತ್ತಿರಲಿಲ್ಲ. ಕುತ್ತದ ಹೊಟ್ಟೆಯಲ್ಲಿಯೇ ಅದರ ಮದ್ದಿರುವಂತೆ ಅದೇ ಜಾಡ್ಯವನ್ನಳಿಸಿ ಪ್ರಾಣೋದ್ದೀಪಕವಾಯಿತು." ಮಹಾಭಾಗ್ಯಶಾಲಿಯಾದ ಭಾರತಕ್ಕೆ ಕುತ್ತು,

ಜಾಡ್ಯ ಬರುವುದೆಂದರೇನು? ಒಂಬತ್ತು ಸಾರೆ ಭಗವಂತನೇ ಅವತಾರ ವೆತ್ತಿ ಬಂದ ಭಾರತದಲ್ಲಿ ಪರಾಧೀನತೆ, ಹೇಡಿತನ, ಬಡತನಗಳು ಮೈವೆತ್ತು ಕುಣಿಯುವುದೆಂದರೇನು? ಈ ಎಲ್ಲ ಬಗೆಯ ಹೋರಾಟ ಗಳಲ್ಲಿ ಭಾರತವು ಶಕ್ತಿ ಸಂಗ್ರಹ ಮಾಡಿತು. ಆದರೂ ಅದರ ಹೀನ ಭಾಗ್ಯದ ದೃಶ್ಯವು ಅನೇಕ ಶತಮಾನಗಳ ವರೆಗೆ ಜಗತ್ತಿನ ಮುಂದೆ ನಿಂತಿತು!

"ಭಾರತದ ಭಾಗ್ಯದ ಸುತ್ತು ಮುಗಿದು ಅವನತಿಯಕಾಲವು ಬಂದ ಸಂಧ್ಯಾಸಮಯದಲ್ಲಿ ಮೂರು ಪ್ರತಿಲೋಮಪ್ರವೃತ್ತಿಗಳು ಕಂಡು ಬಂದವು. ಒಮ್ಮೆ ತುಂಬಿ ಹೊರಸೂಸುತ್ತಿದ್ದ ಭಾರತದ ಪ್ರಾಣಬಲ ಇಂಗಿತು. ಬಾಳಬೇಕು, ಬದುಕಬೇಕು, ಹುಟ್ಟಬೇಕು–ಎಂಬ ಹಿಗ್ಗೇ ಹೀರಿ ಹೋಯಿತು. ಪ್ರಾಣಬಲ ಇಂಗಿದ ಮೇಲೆ ರಾಷ್ಟ್ರವು ತಮಸ್ಸಿ ಗಿಳಿಯಿತು. ತಮಸ್ಸೆಂದರೆ ಘೋರ ನಿಶಿ. ಅದು ಸಾವಿಗಿಂತ ಕಡೆ. ಭಾರತವು ಭಾಗ್ಯಹೀನವಾದ ಮೇಲೆ ಈ ತಮಸ್ಸು ಅವಕ್ಕೆ ಒದಗಿದ ಮೊದಲಿನ ಕೇಡು. ಮೊದಲಿನಿಂದಲೂ ಮನೆಮಾಡಿಕೊಂಡು ನಿಂತ ಬುದ್ಧಿಸ್ವಾತಂತ್ರ್ಯದ ಪ್ರವೃತ್ತಿಯು, ವೇಗದಿಂದ ವಿರಾಮ ಹೊಂದಿತು. ಅಲ್ಲದೆ ಶಾಸ್ತ್ರೀಯ, ವಿಮರ್ಶಕ ಹಾಗೂ ಪ್ರತಿಭಾ ಪ್ರಜ್ಞೆಗಳು ಗಾಢನಿದ್ರೆ ಯಲ್ಲಿ ಮುಳುಗಿದವು. ಇದೇ ಎರಡನೇ ಕೇಡು. ಇನ್ನು, ಹಳೆಯ ಗಳಿಕೆಯ ಜ್ಞಾನದ ತುಣುಕು ಮಿಣುಕುಗಳನ್ನು ಯದ್ವಾತದ್ವಾರೀತಿಯಲ್ಲಿ ಪುನರುಚ್ಚಾರಣೆ ಮಾಡುತ್ತ ಕುಳಿತುಕೊಳ್ಳುವುದು, ಮೂರನೇ ಕೇಡು. ಹೀಗೆ ಭಾರತವು ಕೊಟ್ಟಕೊನೆಯ ಅವನತಿಯ ತಗ್ಗಿನಲ್ಲಿ ಬಿದ್ದರೂ ಅದು **"ಕಳಕೊಳ್ಳಲಾರದ ವಸ್ತುವೆಂದರೆ ಅಧ್ಯಾತ್ಮದ ಮುದ್ರೆ ಒಂದೇ ಸರಿ."**

ಮ. ಗಾಂಧಿಯವರು ರಾಜಕಾರಣದಲ್ಲಿ ಬಳಸಿದ **ಸತ್ಯ, ಅಹಿಂಸೆ** ಮೊದಲಾದವುಗಳು ನಿರ್ವಾಹವೇ ಇಲ್ಲದ ಪ್ರಸಂಗದಲ್ಲಿ ಬಳಸಿದ ಪರ ಮಾರ್ಥದ ಪದ್ಧತಿಯೆಂದು ಕೆಲವರು ಆಡಿಕೊಳ್ಳುವುದುಂಟು. ಆದರೆ "ಬೆದರಿ ಎದೆಗುಂದಿದ ಬುದ್ಧಿ ಹಾಗೂ ಅರೆಹೊಟ್ಟೆಯಿರುವ ಜೀವಗಳುಳ್ಳ ಕಸುವುಗೆಟ್ಟ ಭೂಮಿಯಲ್ಲಿ ಪಾರಮಾರ್ಥಿಕತೆಯ ಹುಲುಸಾದ ಬೆಳೆ ಬರುವದೆಂದು ತಿಳಿಯುವುದು ದೊಡ್ಡ ತಪ್ಪು." ಎಂದು ಶ್ರೀ ಅರವಿಂದರು

ಎಚ್ಚರಿಸಿದ್ದಾರೆ. ಅಲ್ಲದೆ ಪರಮಾರ್ಥಬುದ್ಧಿಯು ಭಾರತಕ್ಕೆ ಕೈಗಡದ ವಸ್ತುವೇನಲ್ಲ. ಅದು ಭಾರತೀಯ ಚಿತ್ತದ ರಾಜರಹಸ್ಯವಾಗಿವೆಯೆಂದು ಸೂಚಿಸಿದ್ದಾರೆ. ಅನಂತದ ಅರಿವು ಅದರ ಹುಟ್ಟುಗುಣವಾಗಿದೆಯೆಂದೂ ಸಾರಿದ್ದಾರೆ. ಅದೆಂಥ ಇಳಿಗಾಲ ಬಂದರೂ ಅದರ ಒಳಗಣ್ಣು ಎಂದೂ ಕುರುಡಾಗಿ ಕಳೆದು ಹೋಗಲಿಲ್ಲವೆಂದೂ ಡಂಗುರಿಸಿದ್ದಾರೆ. ನಿರ್ಭಾಗ್ಯ ಭಾರತಕ್ಕೆ ಚಿರಆಸ್ತಿಗಳಾಗಿ ಅಧ್ಯಾತ್ಮಮುಪ್ರೆಯೂ ಒಳಗಣ್ಣೂ ಉಳಿದ ವಷ್ಟೇ? ಅವೇ ಮುಂದೆ ಕ್ರಮವಾಗಿ ಭಾರತವು ಕಳಕೊಂಡ ಸರ್ವ ಭಾಗ್ಯಗಳನ್ನು ತಂದೊದಗಿಸಿಕೊಡಲಿಕ್ಕೆ ಅಣಿಯಾಗಿ ನಿಂತವೆನ್ನುವುದಕ್ಕೆ ಅಡ್ಡಿಯೆ ತೋರುವದಿಲ್ಲ.

ಇತ್ತೀಚಿನ ನೂರು ನೂರಿಪ್ಪತ್ತೈದು ವರುಷಗಳ ಭಾರತದ ಇತಿಹಾಸವನ್ನು ನೋಡಿರಿ. ಅದೆಷ್ಟು ಉಜ್ವಲವಾಗಿದೆ! ಅದರ ಹುರುಪು ಹುಮ್ಮಸುಗಳನ್ನು ಯಾರೂ ಅಳೆಯುವಂತಿಲ್ಲ! ಅದು ಇಟ್ಟ ಹೆಜ್ಜೆ ಅದೆಷ್ಟು ದೊಡ್ಡವು! ಅದರ ವೇಗವೆಷ್ಟು ಒತ್ತರ! ಅವೆಲ್ಲ ಘಟನೆಗಳು ಅದ್ಭುತಪವಾಡಗಳಂತೆ ಒದಗಿ ಬರುತ್ತಿರುವುದಕ್ಕೆ ಭಾರತದ ಆತ್ಮಜಾಗೃತಿಯೇ ಕಾರಣವಾಗಿದೆ. ಜಾಗೃತಗೊಂಡ ಭಾರತದ ಆತ್ಮದಿಂದ ಅದರ ಬುದ್ಧಿಯು ಬೆಳಗತೊಡಗಿತು: ಅದರ ಪ್ರಾಣದ ತ್ರಾಣವು ಅಸದಳವಾಯಿತು; ಅದರ ಸ್ಥೂಲದೇಹದ ಅಂಗಾಂಗಗಳು ಸಹ ಗಟ್ಟಿಗೊಳ್ಳತೊಡಗಿದವು. **"ಭವಿಷತ್ ಕಾಲದಲ್ಲಿ ಭಾರತದ ಭಾರವನ್ನು ಹೆಗಲ ಮೇಲೆ ಹೊತ್ತುಕೊಂಡು ಭಾರತಮಾತೆಯು ಏಳಹತ್ತಿದ್ದಾಳೆಂ"** ಬುದನ್ನು ಶ್ರೀ ಅರವಿಂದರು ನಾಲ್ವತ್ತುವರುಷಗಳ ಹಿಂದೆಯೇ ಕಂಡಿದ್ದಾರೆ. **"ಜಗತ್ ಶ್ರೇಷ್ಠ ಭಾರತಜಾತಿಯು ಘೋರಕತ್ತಲೆಯಿಂದ ಮುಚ್ಚಲ್ಪಟ್ಟಿತು. ಹೇ ತಾಯೇ! ನೀನು ಗಗನದಲ್ಲಿ ಮೇಲಿಂದ ಮೇಲೆ ಉದಿತಳಾಗ ಹತ್ತಿರುವೆ"** ಯೆಂದು ಅವರು ಶ್ರೀ ದುರ್ಗಾಮಾತೆಯನ್ನು ಕಂಡು ಅದೆಂದೋ ಪ್ರಾರ್ಥಿಸಿಕೊಂಡಿದ್ದಾರೆ. ಆದುದರಿಂದ ಭಾರತದ ಆತ್ಮಜಾಗೃತಿಯ ಮಾತು ಹುರುಳಿಲ್ಲದ ಮಾತು ಎನ್ನಲಿಕ್ಕೆ ಬರುವದಿಲ್ಲ.

ರಾಷ್ಟ್ರಸಭೆಯ ಸ್ಥಾಪನೆಯಾಗಲಿ, ಶ್ರೀ ದಾದಾಭಾಯಿ ನವರೋಜಿಯವರ ಮಂತ್ರಸಂದೇಶವಾಗಲಿ ತೀರ ಮೊದಲಿನ ಮಾತೆಂದು ಬಿಡೋಣ.

ರಾಷ್ಟ್ರಸಭೆಯ ಇಪ್ಪತ್ತುವರುಷಗಳ ಕಥೆಯನ್ನೂ ಬಿಡೋಣ. ೧೯೦೫ರಲ್ಲಾದ ವಂಗಭಂಗದ ಆಂದೋಲನದಿಂದ ಎದ್ದ ಬಿರುಗಾಳಿಯು ಭಾರತದ ಆತ್ಮಜಾಗೃತಿಯ ಒಂದು ಮಿಸುಕೇಸರಿ. ಅಂತೆಯೇ 'ವಂದೇಮಾತರಂ' ಎಂಬ ಪ್ರಾರ್ಥನಾಮಂತ್ರವು ಭಾರತೀಯರಿಗೆ ರಾಷ್ಟ್ರದೀಕ್ಷೆಕೊಟ್ಟಿತು. ಕವಿ–ಸಂಸಾರಿಯಾಗಿ ಬಡೋದೆಯಲ್ಲಿ ನೆಲೆಸಿಂತ ಶ್ರೀ ಅರವಿಂದರು ರಾಷ್ಟ್ರನಾಯಕರಾಗಿ ಕಲಕತ್ತೆಗೆ ಧಾವಿಸಿದರು. 'ವಂದೇ ಮಾತರಂ' ಪತ್ರಿಕೆಯಿಂದ ಭಾರತದ ಅಂಗಾಂಗಗಳು ಎಚ್ಚರಗೊಂಡು ನಿಂತವು. ಇವು ಸಣ್ಣ ಮಾತೇ? ಲೋಕಮಾನ್ಯ ತಿಲಕರು ಸ್ವರಾಜ್ಯವೇ ನಮ್ಮ ಜನ್ಮಸಿದ್ಧಹಕ್ಕೆಂದು ಉಗ್ಗಡಿಸಿದರು. ಕರ್ಮಯೋಗವನ್ನು ಹೊತ್ತು ನಿಂತರು. ದೇಶಾಂತರವಾದ ಮಂಡಾಲೆಗೆ ಆರುವರುಷಗಳ ಸಶ್ರಮಶಿಕ್ಷೆ ಭೋಗಿಸಲು ಹೊರಟು ಹೋದರು. ಇದರ ಅರ್ಥನೇನು? ರಾಜಾ ರಾಮಮೋಹನರಾಯರು ಸಹಗಮನವನ್ನು ನಿಲ್ಲಿಸುವ ಎತ್ತುಗಡೆ ನಡೆಸಿದರು. ಅದು ಆತ್ಮಸಾಹಸವಲ್ಲದೆ ಇನ್ನೇನು? ನಿಷಿದ್ಧವೆಂದು ನಿರ್ಣಯವಾದ ಪರದೇಶಗಮನಕ್ಕೆ ದಾರಿಹಾಕಿಕೊಟ್ಟ ಬಂಟಪಯಣಿಗರೂ ಅವರೇ. ವಿಧವೆಯರಿಗೆ ಪುನರ್ವಿವಾಹವು ಬೇಡವೇಕೆಂದು ಅವರು ಹೇಳಿದರು. ದಲಿತವರ್ಗದ ಜನರಿಗೆ ಸಂಸ್ಕೃತವನ್ನು ಕಲಿಸಿಕೊಡಬಾರದೇಕೆಂದು ಪ್ರಶ್ನೆಯೆತ್ತಿದರು. ಅವುಗಳನ್ನು ಬಳಕೆಯಲ್ಲಿ ತಂದೇಬಿಟ್ಟ ಈಶ್ವರಚಂದ್ರವಿದ್ಯಾಸಾಗರರಲ್ಲಿ ಕಳೆಗೊಂಡತೇಜವು ಏತರದು? ಭಾರತದ ಹೊರಜೀವನವು ಕಂಗಾಲವಾದರೇನು? ಅದು ಸಂಪನ್ನರಾಷ್ಟ್ರಗಳಾದ ಅಮೇರಿಕೆಗೂ ಇಂಗ್ಲಂಡಕ್ಕೂ ವಿಪುಲವಾಗಿ ಕೊಡಬಹುದಾದ ಆತ್ಮಸಂಪತ್ತು ಅದರಲ್ಲಿ ಅಮಿತವಾಗಿದೆಯೆಂದು ಸಿಂಹಗರ್ಜನೆ ಮಾಡಿದ ವಿವೇಕಾನಂದರ ಕೆಚ್ಚು ಆತ್ಮಜಾಗೃತಿಯದಲ್ಲವೇ? ಹುಟ್ಟಾ ವ್ಯಾವಹಾರಿಕರಾದ ಪಾಶ್ಚಾತ್ಯರಲ್ಲಿ ವ್ಯವಹಾರವೇದಾಂತದ ಹುಚ್ಚು ಹೊಳೆ ಹರಿಯಿಸಿ ಭಾರತದ ಹಿರಿಮೆಯನ್ನು ತೋರಿಸಿಕೊಟ್ಟು ಬಂದ ರಾಮತೀರ್ಥರಲ್ಲಿ ಬೆಳಗಿದ ಹಣತಿಯು ಏತರದು? ರಾಮಕೃಷ್ಣಪರಮಹಂಸರ ಅನುಭವಗಳಿಂದ ಭಾರತದ ಸರ್ವಧರ್ಮಗಳ ಪವಣಿಕೆಯು ಒಂದೇ ಒಂದು ಉಸುರಿಗೆ ಒದಗಿಬಂದಿತು. ಅದಕ್ಕೆ ಆತ್ಮಜಾಗೃತಿಯೆನ್ನದೆ

ಗತಿಯೇ ಇಲ್ಲ. ಬುದ್ಧಿವಂತರನ್ನು ಅಂದರೆ ಹೊಸಪದ್ಧತಿಯಂತೆ ಕಲಿತವರನ್ನು ಆತ್ಮಮಾರ್ಗಕ್ಕೆ ತಲಪಿಸುವದಕ್ಕಾಗಿ ದುಡಿದ ಸಮಾಜಗಳು ನಾಲ್ಕು. ಅವು ಕಲಕತ್ತೆಯ ಬ್ರಹ್ಮಸಮಾಜ, ಮುಂಬಯಿಯ ಪ್ರಾರ್ಥನಾ ಸಮಾಜ, ಮದರಾಸಿನ ಬ್ರಹ್ಮವಿದ್ಯಾಸಮಾಜ, ಪಂಜಾಬಿನ ಆರ್ಯ ಸಮಾಜ. ಈ ಸಮಾಜಗಳನ್ನು ಕಟ್ಟುವುದರಲ್ಲಿ ಪ್ರಮುಖಪಾತ್ರವಹಿಸಿದ ಮಹರ್ಷಿದೇವೇಂದ್ರನಾಥ, ನ್ಯಾಯಮೂರ್ತಿ-ಮಹಾದೇವ ಗೋವಿಂದ ರಾನಡೆ, ಆನಿ ಬಿಝಂಟಮ್ಮ, ದಯಾನಂದ ಸರಸ್ವತಿ ಮೊದಲಾದವರಲ್ಲಿ ನೆಲೆಗೊಂಡ ಉತ್ಸಾಹವು ಏತರಫಲವಾಗಿ ಚಿಮ್ಮಿತು? ಕವೀಂದ್ರ ರವೀಂದ್ರನಾಥರ ಕವನ-ಸಾಹಿತ್ಯಗಳಿಗೆ ಆತ್ಮಲೋಕದಿಂದಲೇ ವಸ್ತು ದೊರಕಿತೆಂದು ಬೇರೆ ಹೇಳುವ ಕಾರಣವೇ ಇಲ್ಲ. ಶಾಂತಿನಿಕೇತನದ ಶಿಲ್ಪಿಗಳ ಚಿತ್ರಕಲೆಗಳೂ ಆತ್ಮದೃಷ್ಟಿಯಿಂದಲೇ ಮೈದೋರಿದವು. ಜಗದೀಶಚಂದ್ರರ ಭೌತವಿಜ್ಞಾನದ ಸಂಶೋಧನಗಳೂ ಆತ್ಮಜಾಗೃತಿಯಲ್ಲಿ ಮರೆಯುವ ಉದಾಹರಣಗಳು. ಜಯ ಹಿಂದ ವೆಂದು ಉಗ್ಗಡಿಸಿದ ಆಝಾದ ಹಿಂದ ಸೇನೆಯನ್ನು ಒಂದುಗೂಡಿಸಿದ ಶೂರ ಸುಭಾಸರ ಸಾಹಸವೂ ಭಾರತಕ್ಕೆ ಹೆಮ್ಮೆಯ ವಿಷಯವೇ ಸರಿ. ಮ. ಗಾಂಧಿಯವರು ಅಸ್ಪೃಶ್ಯತಾನಿವಾರಣೆಯ ಕಾರ್ಯವನ್ನು ಕತ್ತಿಯ ಮೇಲೆ ನಡೆದವರಂತೆ ಕೊನೆಗಾಣಿಸಿದರು. ಅವರು ಹಿಂದು ಮುಸಲ್ಮಾನರ ಐಕ್ಯಕ್ಕಾಗಿ ದುಡಿದದ್ದು ಜ್ವಾಲಾಮುಖಿಯ ಬಾಯಲ್ಲಿ. ಅವರಿಂದ ಪ್ರಾಪ್ತವಾದ ಭಾರತದ ಸ್ತ್ರೀವರ್ಗದ ಅಗ್ಗಳಿಕೆಯೂ ಜಾಗೃತಿಯೂ ಆತ್ಮಪೌರುಷದ ಮಾತುಗಳಲ್ಲಿ ಭಾರತದ ರೀತಿನೀತಿಗಳನ್ನು ಕಂಡು ಮೂಗು ಮುರಿಯುವ ಯುರೋಪದವರು, ಯುರೋಪಿನ ನಡೆ-ನಡವಳಿಕೆಗಳನ್ನು ಬಾಯಿಗೆ ಬಂದಂತೆ ತೆಗಳುವ ಭಾರತೀಯರು-ಕದ್ದುಮುಚ್ಚಿ ಪರಸ್ಪರರೊಳಗಿನ ಒಳ್ಳೆಯ ಗುಣಗಳನ್ನು ಅನುಕರಿಸಿ ತಮ್ಮದನ್ನಾಗಿ ಮಾಡಿಕೊಳ್ಳುವ ಒಲವು ಆತ್ಮಜಾಗೃತಿಯನ್ನೇ ತೋರಿಸುತ್ತದೆ. ಈ ಇತಿಹಾಸವೆಲ್ಲವನ್ನೂ ವಿವರವಾಗಿ ನೋಡುವವರಿಗೆ ಸಾಲುಸಾಲಿನಲ್ಲಿಯೂ ಕಂಡುಬರುವುದು—ಭಾರತದ ಆತ್ಮಜಾಗ್ರತಿಯೊಂದೇ ಎಂದು ಹೇಳಬಹುದಾಗಿದೆ.

---

# ಆತ್ಮಜಾಗೃತಿಗೆ ಸ್ವರಾಜ್ಯ ದೂರವೇ?



ಬಾಹುಬಲವುಳ್ಳವನನ್ನು ಬುದ್ಧಿಬಲವುಳ್ಳವನು ಸಹಜವಾಗಿ ಗೆಲ್ಲುತ್ತಾನೆ. ಅದರಂತೆ ಮಹಾಮೇಧಾವಿಯಾದ ಬುದ್ಧಿಬಲವುಳ್ಳವನನ್ನು ಸಹ ಆತ್ಮಬಲವುಳ್ಳವನು ಸಹಜವಾಗಿ ವಶಪಡಿಸಿಕೊಳ್ಳುತ್ತಾನೆ. ಈ ಉದಾಹರಣೆಯನ್ನು ಹುಡುಕುವದಕ್ಕೆ ನಾವು ಎಲ್ಲಿಯೂ ಹೋಗಬೇಕಾಗಿಲ್ಲ. ಒಬ್ಬನೇ ಒಬ್ಬ ಮಂತ್ರಿಯ ಸಲಹೆಯನ್ನು ಅನುಸರಿಸಿ ಲಕ್ಷಾವಧಿ ಕೋಟ್ಯಾವಧಿ ಪ್ರಜೆಗಳನ್ನು ಶಾಂತಿಯಲ್ಲಿರಿಸಿ ಆಳುವ ರಾಜನ ಕಥೆಯನ್ನು ಕೇಳಿದ್ದೇವೆ. ಅಂಥ ಪರಚಕ್ರ ಕೋಳಾಹಳನಾದ ರಾಜನು ಒಬ್ಬ ಯತಿಗೆ ತಲೆವಾಗುವುದನ್ನು ನಮ್ಮ ಇತಿಹಾಸದ ಪುಟಗಳಲ್ಲಿ ಕಾಣುವೆವು. ವ್ಯಕ್ತಿಯ ಆತ್ಮಬಲವೇ ಇಷ್ಟೊಂದು ಬಲಶಾಲಿಯಾಗಿರುವಾಗ ನಾಲ್ವತ್ತು ಕೋಟಿ ವ್ಯಕ್ತಿಗಳನ್ನು ಹೊತ್ತು ಹಿಡಿದಿರುವ ಭಾರತ ದೇಶದ ಆತ್ಮಬಲವು ಅದೆಷ್ಟು ಬಲಶಾಲಿಯಾಗಿರಬೇಡ? ಆತ್ಮಜಾಗೃತಿಗೊಂಡ ಭಾರತವು ತಾನು ಸಂಕಲ್ಪಿಸಿದ್ದನ್ನು ಕೆಲವೊಂದು ಕ್ಷಣಗಳಲ್ಲಿ ಮಾಡಿ ಮುಗಿಸಬಹುದು. ಆದರೆ ಅದು ಪೋಡಿಯಾಟವಾಗಿರಲಾರದು. ಹದಿನಾಲ್ಕು ಲೋಕಗಳನ್ನು ಅಷ್ಟೇ ಏಕೆ, ಭುವನ ಬ್ರಹ್ಮಾಂಡಗಳನ್ನು ಸಹ ಇಚ್ಛಿಸಿದ ಮಾತ್ರಕ್ಕೆ ಕಣ್ಣುಮುಂದೆ ತಂದು ನಿಲ್ಲಿಸಿಕೊಳ್ಳುವ ಆತ್ಮಬಲವುಳ್ಳ ಯೋಗಿವರ್ಯರು, ಭಾರತದ ಆತ್ಮವು ಬಿಡುಗಡೆ ಹೊಂದಿರುವುದನ್ನು ಮೂವತ್ತೈದು ವರುಷಗಳ ಮೊದಲೇ ಕಂಡಿದ್ದರೆಂಬು ಕೇಳಿ ನಾವು ನಂಬಲಿಕ್ಕಿಲ್ಲ!

ಜಾಗ್ರತಗೊಂಡ ಭಾರತದ ಆತ್ಮವು ತನ್ನ ಮಕ್ಕಳಲ್ಲಿ ದೇಶಭಕ್ತಿಯನ್ನು ಹುಟ್ಟಿಸಿತು. ಅವರನ್ನು ತ್ಯಾಗಜೀವನಕ್ಕೆ ಎಳಸಿತು. ಸೇನೆ-ತೋಪು-ತುಬಾಕಿಗಳಿಗೂ ಹಣಿಯದ ಒಂದು ಅಸ್ತ್ರವನ್ನು ಮ. ಗಾಂಧಿಯವರ ಮುಖದಿಂದ ಹೇಳಿಸಿತು. ಮನುಷ್ಯನಿಗೆ ಸರಿಹೊಂದುವ ಲೆಕ್ಕಾಚಾರದಲ್ಲಿ ಕೆಲವೊಂದು ಸಮಯ ಕಳೆದ ಮೇಲೆ ದೇಶದ ಪರಿ

ಸ್ಥಿತಿಯು ಹದಕ್ಕೆ ಬಂದಿತು. ಆಗ ಸ್ವರಾಜ್ಯ ಬೇಡುವವಕ್ಕೆ ತಕ್ಕ ಮಾತುಗಳನ್ನು ಯೋಗ್ಯರಿಂದ ನುಡಿಸಿದ್ದು ಭಾರತದ ಆತ್ಮವೇ. ಭಾರತ ಮಾತೆಯು ತನ್ನ ಸ್ವರಾಜ್ಯವನ್ನು ತಾನೇ ತಂದುಕೊಂಡಳೆಂದು ಹೇಳು ವುದು ಸರಿಯಾದದ್ದು.

**" ಜಗತ್ಕಲ್ಯಾಣದ ಸಲುವಾಗಿ ಭಾರತವನ್ನು ಬಂಧಮುಕ್ತ ಮಾಡುತ್ತಿದ್ದೇನೆ "** ಎಂಬ ಸಂದೇಶವು ಪರಮಾತ್ಮನಿಂದ ಶ್ರೀ ಅರವಿಂದ ರಿಗೆ ದೊರೆತುದನ್ನು ಮನದಂದರೆ ಭಾರತದ ಬಿಡುಗಡೆಗೆ ಪರಮಾತ್ಮನ ಬೆಂಬಲವೇ ಇತ್ತೆಂದು ಹೇಳಬಹುದು. ಬೆಂಬಲವೆನ್ನುವದಕ್ಕಿಂತ ಮುಂಬಲವೇ ಇತ್ತೆಂದರೆ ಹೆಚ್ಚು ಒಪ್ಪುವದು. ಅಂಥ ಮುಂಬಲ ಬೆಂಬಲಗಳಿಲ್ಲದಿದ್ದರೆ ಬ್ರಿಟಿಶರು ಭಾರತವನ್ನು ಬಿಟ್ಟುಕೊಟ್ಟು ಹೋಗು ತ್ತಿದ್ದರೆ? ಹಾಗೆ ಓಡಿಹೋಗಲಿಕ್ಕೆ ಅವರೇನು ಹೇಡಿಗಳೇ? ನಿಂತ ಕಾಲ ಮೇಲೆ ತಮ್ಮ ಗೂಡುಚಾಪೆ ಕಿತ್ತುಕೊಂಡು ಹೋಗಲಿಕ್ಕೆ ಅವರನ್ನು ಯಾರು ಹೆದರಿಸಿದರು? ಅವರೇತಕ್ಕೆ ಬೆದರಿದರು? ಇತ್ತ ಜರ್ಮನಿ ಜಪಾನಗಳೊಡನೆ ತುಮುಲ ಯುದ್ಧ ನಡೆದ ಗೊಂದಲಿಗಳು. ಅತ್ತ ಇಂಗ್ಲಂಡದ ರಕ್ತಗುಂಡಿಗೆಯಾದ ಲಂಡನವು ವೈರಿಗಳ ಬಾಂಬುಗಳ ಹೊಡೆತದಿಂದ ಹಾಳಾಗಿ ಹುಡಿಗೂಡುತ್ತಿರುವ ಕುತ್ತುಗಳು. ಇನ್ನು ಭಾರತದ ಒಳದೇಶದಲ್ಲಿ ' ಚಲೇಜಾವ ' ಆಂದೋಲನವು ತನ್ನ ವೈಕ್ರಿ ಗಳನ್ನು ಹರಕೊಂಡು ಅಬ್ಬರಿಸುವ ಗುಡುಗಾಟ. ಆಗ ಸಹ ಎಳ್ಳಷ್ಟು ಕದಲದೆ ಧೈರ್ಯದಿಂದ ನಿಂತವರು ಬ್ರಿಟಿಶರು. ಅವರ ಮುಖದ ಮೇಲಿನ ಕಿರುನಗೆಯು ಮುಗುಳಿಯೇ ಇದ್ದಿತು. ಅವರ ತಲೆಯಲ್ಲಿ ವಿಜಯ ಸನ್ನಾಹ, ಯುದ್ಧೋತ್ತರ ಯೋಜನೆಗಳೇ ತುಂಬಿತುಳುಕುತ್ತಿದ್ದವು. ಅಂಥವರು ಯುದ್ಧ ಮುಗಿದು ತಮ್ಮಣಿಯಾದ ಬಳಿಕ, ಶಾಂತಿಕಾಲದಲ್ಲಿ ಭಾರತವನ್ನು ಭಾರತೀಯರಿಗೆ ಒಪ್ಪಿಸುವದಕ್ಕೆ ಅವರ ಜೀವದ ಮೇಲೆ ಬಂದ ಗಂಡಾಂತರವಾದರೂ ಏನಿತ್ತು? ಕರೆದು ಸ್ವರಾಜ್ಯ ಕೊಡಲಿಕ್ಕೆ ಅವರು ಅದರ ಭಾರಕ್ಕೆ ಕುಸಿಬಿದ್ದಿದ್ದರೇ? ಮುಸ್ಲೀಮ ಲೀಗಿಗೆ ಅಂಜಿದರೇ? ಒಂದು ಮಹಾಸಭೆಗೆ ಸೊಪ್ಪುಹಾಕಿದರೇ? ರಾಷ್ಟ್ರೀಯ ಸಭೆಯ ಅರವತ್ತು ವರುಷಗಳ ಆಂದೋಲನದ ಪರಿಚಯವು ಅವರಿಗಿರಲಿಲ್ಲವೇ? ಅಂಥ

ಆಂದೋಲನದ ಕ್ರಮವನ್ನು ಸಹ ನಮಗೆ ಕಲಿಸಿಕೊಟ್ಟವರೇ ಬ್ರಿಟಿಶ ರಲ್ಲವೇ? ಅದರಂತೆ ಆಜಾದಹಿಂದ ಸೇನೆಯೊಡನೆ ಪ್ರತ್ಯಕ್ಷ ಯುದ್ಧ ಮಾಡಿದರೇ ಬ್ರಿಟಿಶರು? ಇಂತು ಭಾರತದ ಸ್ವಾತಂತ್ರ್ಯಕ್ಕೆ ತಾವೇ ಕಾರಣರೆಂದು ಹಲವರು ಹಲವು ವಿಧವಾಗಿ ಹೇಳಿಕೊಳ್ಳುತ್ತಾರೆ. ಅವರು ಎಷ್ಟು ಹೇಳಿಕೊಂಡರೂ ಅವೆಲ್ಲವೂ ಸಂಪೂರ್ಣ ಸತ್ಯವೆನಿಸಲಾರವು: ಅವು ತುಸುಮಟ್ಟಿಗೆ ಹೊರಕಾರಣಗಳೆನಿಸಬಹುದು. ಆದರೆ ನಮಗೆ ಸ್ವರಾಜ್ಯ ದೊರೆತುದು ಆತ್ಮಜಾಗ್ರತಿಗೊಂಡ ಭಾರತಶಕ್ತಿಯಿಂದಲೇ ಸರಿಯೆಂದು ನಾವು ನಂಬಬೇಕಾಗಿದೆ. **"ತಾಯೇ ದುರ್ಗೇ! ನಾವೆಲ್ಲರೂ ಜೀವನ ಸಂಗ್ರಾಮದಲ್ಲಿ ಮತ್ತು ಭಾರತ ಸಂಗ್ರಾಮ ದಲ್ಲಿ ನಿನ್ನ ಮುಖಾಂತರ ಪ್ರೇರಿತರಾದ ಯೋದ್ಧರು........ಜನ್ಮ ಜನ್ಮಗಳಲ್ಲಿ ನಿನ್ನದೇ ಕಾರ್ಯವನ್ನು ಮಾಡಿದವರು. ಈ ಸಲವೂ ಜನ್ಮತಳೆದು ನಿನ್ನ ಕಾರ್ಯಕ್ಕೆ ವ್ರತಿಗಳಾಗಿದ್ದೇವೆ"** ಎಂದು ಜೊಗಸೆಯೊಡ್ಡಿ ಶ್ರೀ ಅರವಿಂದರ ಪ್ರಾರ್ಥನೆಯಲ್ಲಿ ದನಿ ಕೂಡಿಸತಕ್ಕಷ್ಟೇ ವಾಸ್ತವಿಕ.

---

# ಸ್ವರಾಜ್ಯ ಪ್ರಾಪ್ತಿಯೇ ಭಾರತದ ಗುರಿಯಲ್ಲ!



ಭಾರತಕ್ಕೆ ೧೯೪೭ ನೇ ಅಗಸ್ಟ ೧೫ ಕ್ಕೆ ಸ್ವರಾಜ್ಯ ಸಿಕ್ಕಿತು! ಇನ್ನು ನಮ್ಮ ಕೆಲಸವೇ ಮುಗಿಯಿತೆಂದು ನಾವೆಲ್ಲರೂ ಭಾವಿಸಿದೆವು. **"ನಿಮ್ಮ ಯಾವ ಕೆಲಸ ಮುಗಿಯಿತು"** ಎಂದು ಕೇಳಿದರೆ, **"ಸ್ವರಾಜ್ಯ ಪಡಕೊಳ್ಳಬೇಕಾಗಿದ್ದಿತು, ಪಡಕೊಂಡೆವು"** ಎಂದು ಮರುನುಡಿಯ ಬಹುದು. ಆದರೆ ನಮಗೆ ದೊರೆತುದು ಸ್ವರಾಜ್ಯವೇ ಅಹುದೋ? ಶ್ರೀ ಅರವಿಂದರ ಶಬ್ದಗಳಲ್ಲಿ ನಮಗೆ ಸಿಕ್ಕದ್ದು ಹರಕುಮುರುಕು ಸ್ವಾತಂತ್ರ್ಯ. ಇಂಥ ಸ್ವರಾಜ್ಯದಿಂದ ನಮಗೆ ಕಲ್ಯಾಣವಾಗುವದಕ್ಕಿಂತ ಅಕಲ್ಯಾಣ ವಾಗುವ ಸಂಭವವೇ ಹೆಚ್ಚಿಗಿದೆಯಂತೆ. ಅಖಂಡ ಭಾರತವೇ ತನ್ನ ಭವಿಷತ್ ಉದ್ದೇಶವನ್ನು ಸರಿಯಾಗಿ ಈಡೇರಿಸಬಲ್ಲದು. ಆದ್ದರಿಂದ

ಈಗ ನಮಗೆ ದೊರಕೊಂಡಷ್ಟು ಹರಕುಮುರಕೇ ಆಗಲೊಲ್ಲದೇಕೆ, ಅರ್ಧ ರಾಜ್ಯವಾದರೂ ನಮ್ಮ ಕೈಗೆ ಬಂದಿದೆಯಲ್ಲವೇ ? ನಮ್ಮ ಕೈಗೆ ಬಂದ ಸ್ವರಾಜ್ಯದಿಂದಲೂ ನಮಗೆ ದೊರಕೊಂಡ ಸ್ವತಂತ್ರತೆಯಿಂದಲೂ ಇನ್ನು ಮೇಲೆ ನಾವು ಸಾಧಿಸಬೇಕಾದುದೇನು ?

**“ ನಾಳೆ ಭರತಖಂಡವು ಅದೆಂಥ ವಿಪುಲ ಕಾರ್ಯವನ್ನು ವಹಿಸಬೇಕಾಗಿರುವದೆಂಬುದರದೇ ಸೂಚನಾಸ್ವರೂಪವಾಗಿ ಸಮಗ್ರ ಜಗತ್ತಿನಲ್ಲಿ ಒಂದು ಮಿಸುಕು ಆರಂಭವಾಗಿದೆ. ಮುಂದಿನ ೩೦-೪೦ ವರುಷಗಳೊಳಗಾಗಿ ಜಗತ್ತಿನಲ್ಲಿ ವಿಪುಲವಾದ ಮಾರ್ಪಾಡಾಗುವದು. ಎಲ್ಲವೂ ತಿರುವುಮುರವು ಆಗಿಬಿಡುವದು. ಆ ಬಳಿಕ ಕಟ್ಟಲ್ಪಟ್ಟು ಎದ್ದು ನಿಲ್ಲುವ ಜಗತ್ತಿನಲ್ಲಿ ಭಾರತ ಸಂಸ್ಕೃತಿಯೇ ಜಗತ್ತಿನ ಸಂಸ್ಕೃತಿಯಾಗುವದು. ಈ ಭವಿಷತ್ ಭಾರತಕಾರ್ಯವು ಕೇವಲ ಭಾರತದ ಸಲುವಾಗಿ ಇರದೆ ಸಮಸ್ತ ಜಗತ್ತಿನ ಸಲವಾಗಿ ಇದೆ ”** ಎಂಬ ವಿವರವನ್ನು ಶ್ರೀ ಅರವಿಂದರು ೧೯೨೦ ರಲ್ಲಿಯೇ ವಿವರಿಸಿದ್ದಾರೆ.

ಇಂಥ ದಿವ್ಯವಾದ ಕಾರ್ಯವನ್ನು ನೆರವೇರಿಸಬೇಕಾದರೆ ಭಾರತವು ಅಖಂಡವಾಗಿರಲೇ ಬೇಕು. ಕ್ರಿಪ್ಸ ಯೋಜನೆಯ ಕಾಲಕ್ಕಾಗಲಿ, ವಾವೆಲ್ ಯೋಜನೆಯ ಕಾಲಕ್ಕಾಗಲಿ ಭಾರತವು ಸ್ವಾತಂತ್ರ್ಯವನ್ನು ಸ್ವೀಕರಿಸಬೇಕಾಗಿತ್ತು. ಹೀಗೆ ಮಾಡಿದ್ದರೆ ಈ ಹಂಡಬಂಡ ಪರಿಸ್ಥಿತಿಯೇ ಬರುತ್ತಿದ್ದಿಲ್ಲವಂತೆ. ಕರೆದು ಸ್ವರಾಜ್ಯ ಕೊಡುವರೆಂದ ಮೇಲೆ ಇದರಲ್ಲೇನಾದರೂ ಕಪಟವಿರಲೇಬೇಕೆಂದು ನಮ್ಮ ಮುಂದಾಳುಗಳು ಯೋಜನೆಗಳನ್ನು ದಿಟ್ಟಿಸಿ ನೋಡತೊಡಗಿದರು. **“ ದಿಟ್ಟಿಸಿ ನೋಡಬೇಡಿರಿ. ಕೊಟ್ಟಷ್ಟು ಕಣ್ಣುಮುಚ್ಚಿ ತಕ್ಕೊಂಡುಬಿಡಿರಿ. ಮುಂದೆ ಎಲ್ಲವೂ ತಾನಾಗಿಯೇ ಸರಿಗೊಳ್ಳುವದು ”** ಎಂದು ಶ್ರೀ ಅರವಿಂದರು ನಾಲ್ವತ್ತು ವರುಷಗಳ ಮಹಾಮೌನವನ್ನು ಮುರಿದು ಹೇಳಿ ಕಳಿಸಿದರು. ಆದರೆ ರಾಜಕೀಯ ವಿಚಾರಶೀಲರಿಗೆ ಆಗ ಅದರ ಅರ್ಥವಾದಂತೆ ತೋರುವದಿಲ್ಲ. ದಿಟ್ಟಿಸಿ ನೋಡಿ ನೋಡಿ ಯೋಜನೆಯನ್ನು ತಳ್ಳಿಹಾಕಿದರು. ದಿಟ್ಟಿಸಿ ನೋಡಿದರೆ ಮನೆಯ ಹೆಂಡತಿಯೂ ಮೆಳ್ಳಿಯಾಗಿ

ಕಾಣಿಸುತ್ತಾಳಂತೆ.! ಮೊದಲು ಬಂದ ಕ್ರಿಪ್ಸ ಯೋಜನೆಯನ್ನು ತಳ್ಳಿ ಹಾಕಿದರು. ಹಿಂದಿನಿಂದಲೇ ವಾವೆಲ್ ಯೋಜನೆಯು ಕೈಚಾಚಿ ನಿಂತಿತು. ಆಗಲೂ ನೋಡಿದ್ದು ಅದೇ ದೃಷ್ಟಿ. ಕಾಣಿಸಿದ್ದು ಅದೇ ದೃಶ್ಯ. ಅದನ್ನೂ ತಳ್ಳಿಹಾಕಲಾಯಿತು. ಆ ಕೆಲಸ ಮಾಡಿದ ಭಾರತದ ಜಾಣಾಕ್ಷತನವನ್ನು ಕೆಲವರು ಕೊಂಡಾಡಿದರು. ಮುಂದಾಳುಗಳ ರಾಜನೀತಿಗೆ ಭಲೆಯೆಂದರು. ನಮ್ಮ ಹಿರಿಯರು ಹಾರುವ ಹಕ್ಕಿಯ ಪುಚ್ಛ ಎಣಿಸುವ ಬಲ್ಲಿದರೆನಿಸಿಕೊಂಡರು. ಬ್ರಿಟಿಶರ ಕವಡುಗಂಟಿಕತನದ ಮಾತ್ರೆಗಳು ಇನ್ನು ಮೇಲೆ ಭಾರತದ ಪೇಟೆಯಲ್ಲಿ ಮಾರಾಟವಾಗಲಾರವೆಂದರು. ಅದು ಏನೇ ಇರಲಿ. ಕಡೆಯಲ್ಲಿ ಈ ಹರಕುಮುರಕು ಸ್ವರಾಜ್ಯವು ಉಡಿಯಲ್ಲಿ ಬಂದಿತು. ಅದರಿಂದ ಯಾವ ಯಾವ ಅಮಾನುಷ ಘಟನೆಗಳು ಅಡ್ಡಯಿಸಿದವೆಂಬುದನ್ನು ವಿವರಿಸುವ ಕಾರಣವಿಲ್ಲ. ಎಂಥ ಎಂಥ ಗಂಡಾಂತರಗಳು ಕತ್ತು ಹಿಸುಕಬಂದವೆಂಬುದನ್ನು ಅರ್ಥಯಿಸುವ ಕಾರಣವಿಲ್ಲ. ಕಾಶ್ಮೀರದ ತೊಡಕು ಹುಟ್ಟಿಕೊಂಡು ಇಂದಿಗೂ ನೆನೆಗುದಿಗೆ ಬಿದ್ದಿವೆ. ಪಾಕಿಸ್ತಾನದಲ್ಲಿ ಹೆಂಡರುಮಕ್ಕಳನ್ನು ಕಳಕೊಂಡು ಕಂಗಾಲಾಗಿ ಅಲ್ಲಿಂದ ಹೈರಾಣರಾಗಿ ಗುಳೇಕಾರರು ಓಡಿ ಬಂದರು. ತಿಪ್ಪೇರಾ-ನೌಖಾಲಿ ಜಿಲ್ಲೆಗಳಲ್ಲಿ ನಡೆದ ಹಿಂದುಗಳ ಕೊಲೆ ಸುಲಿಗೆ ಅತ್ಯಾಚಾರ, ಅದಕ್ಕೆ ಪ್ರತಿಯಾಗಿ ನಡೆದ ಪ್ರತಿಕಾರ, ಇವಿಷ್ಟೇ ಉದಾಹರಣೆಗಳು ಸಾಕು !

ಸ್ವರಾಜ್ಯ ಪ್ರಾಪ್ತಿಯಾಯಿತೆಂದು ೧೯೪೭ನೇ ಅಗಸ್ಟ ೧೫ಕ್ಕೆ ಎಲ್ಲಿ ನೋಡಿದರೂ ಸ್ವಾತಂತ್ರ್ಯೋತ್ಸವವು ನಡೆಯಿತು. ಊರೂರಿಗೆ ಸಾವಿರ ದೀಪಗಳು ಮಿಣುಕಿದವು. ಜಯಜಯಕಾರವು ನಿನದಿಸಿತು. ಮಕ್ಕಳಿಗೆಲ್ಲ ಸವಿದಿನಿಸು ಹಂಚಲಾಯಿತು. ಆಗಿನ್ನೂ ಬದುಕಿದ್ದ ಮ. ಗಾಂಧಿಯವರು ಆ ಯಾವ ಉತ್ಸವದಲ್ಲಿಯೂ ಭಾಗವಹಿಸಲಿಲ್ಲ. ಅವರು ನೇರವಾಗಿ ತಿಪ್ಪೇರಾ ನೌಖಾಲಿಗಳ ಕಡೆಗೆ ಧಾವಿಸಿದರು. ಅದು ಮಹಮ್ಮದಿಯರು ಕೆರಳಿದ ಸ್ಥಳ. ಹಿಂದುಗಳು ಕೊಲೆಗೀಡಾದ ಸ್ಥಳ. ಅಲ್ಲಿಗೆ ಹೋದ ಮ. ಗಾಂಧಿಯವರು ಹಿಂದು ಮುಸ್ಲಿಮರಲ್ಲಿ ಮಮತೆಯನ್ನುಂಟು ಮಾಡಲು ತಮ್ಮ ಪುಣ್ಯವನ್ನೆಲ್ಲ ಖರ್ಚುಮಾಡಲು ತೊಡಗಿ

ವರು. ಅದು ಅವರಿಗೆ ಕಾರ್ಯೋತ್ಸವವಾಯಿತು. ಅವರ ದೃಷ್ಟಿಯಲ್ಲಿ ಸ್ವರಾಜ್ಯಪ್ರಾಪ್ತಿಯು ಪರಿಪೂರ್ಣವೆನಿಸಲಿಲ್ಲವೇನೋ! ಅವೆಷ್ಟೊ ಕೊರತೆಗಳು ಅವರಿಗೆ ಅದರಲ್ಲಿ ಗೋಚರಿಸಿದವು. ಅಷ್ಟು ಕೊರತೆಗಳಿದ್ದ ಸ್ವರಾಜ್ಯವು ಅವರಿಗೆ ಹರುಷವನ್ನುಂಟು ಮಾಡಲಿಲ್ಲ. ಸಂಪೂರ್ಣ ಸ್ವಾತಂತ್ರ್ಯವೊಡನೆ ಕೈಗೆ ಬಂದ ಸ್ವರಾಜ್ಯವು ನಮ್ಮೆಲ್ಲರಿಗೆ ಒಮ್ಮೆಲೆ ತೃಪ್ತಿಪಡಿಸಲಿಲ್ಲ. ನಮ್ಮ ಹೀನಸ್ಥಿತಿಗೆ ಪಾರತಂತ್ರ್ಯವೊಂದೇ ಕಾರಣವಾಗಿದ್ದಂತೆ ತೋರುವದಿಲ್ಲ. ಹಾಗಿದ್ದರೆ ಅದು ದೊರೆತು ಇಷ್ಟು ದಿನಗಳಾದರೂ ನಮ್ಮ ಹೀನಸ್ಥಿತಿಯಲ್ಲಿ ಮಾರ್ಪಾಡಾಗಲಿಲ್ಲ. ನಮ್ಮ ದುರವಸ್ಥೆಗೆ ಬಡತನವು ಕಾರಣವೆಂದು ಕೆಲವರು ಆಡುವರು. ಧರ್ಮಹೀನತೆಯು ಕಾರಣವೆಂದು ಹಲವರು ಹೇಳುವರು. ಆ ಮಾತು ಕೆಲಮಟ್ಟಿಗೆ ನಿಜವೆನಿಸಿದರೂ ಸಂಪೂರ್ಣ ಸತ್ಯವಲ್ಲವೆನ್ನುವುದು ವಿಚಾರಿಸಿದರೆ ತಿಳಿಯುವದು. ಅಕ್ಷರಾಭ್ಯಾಸವು ನಾಗರಿಕನಿಗೆ ಜೀವನದ ಗುರಿಯಾಗಲಾರದು. ಅದು ಅವನ ಜೀವನಕ್ಕೊಂದು ಸಾಧನವಾಗಬಲ್ಲದು. ಅದೇ ರೀತಿಯಾಗಿ ಸ್ವರಾಜ್ಯಪ್ರಾಪ್ತಿಯು ಭಾರತೀಯರ ಜೀವನಕ್ಕೊಂದು ಸಾಧನವೇ ಆಗುತಲ್ಲದೆ ಅದೊಂದು **ಸಿದ್ಧಿಯಾಗಲಾರದು.** ಸ್ವರಾಜ್ಯವೇ ಗುರಿಯೆಂದು ತಿಳಕೊಂಡವರು ಸಹ ಅದು ದೊರೆತ ಬಳಿಕ ತಮ್ಮ ವಿಚಾರವು ಸರಿಯಾದುದಲ್ಲವೆಂದು ಮನಗಂಡಿರಬಹುದು.

## ಭಾರತವು ಕೈಕೊಳ್ಳಬೇಕಾದ ಜಾಗತಿಕ ಕಾರ್ಯ



ತನ್ನದೇ ತನಗೆ ನೆಲೆಯಿಲ್ಲದ ಭಾರತವು ಜಾಗತಿಕ ಕಾರ್ಯವನ್ನು ಕೈಕೊಳ್ಳುವುದೇ? ಮನೆಗೆಲ್ಲಲಾರದವನು ಮಾರುಗೆಲ್ಲುವನೇ? ಭಾರತಕ್ಕೆ ಸ್ವರಾಜ್ಯ ದೊರೆತ ಬಳಿಕ ಅದು ಸಾವಧಾನವಾಗಿ ತನ್ನ ಸರ್ವ ಕುಂದುಕೊರತೆಗಳನ್ನು ಮೊದಲು ನಿವಾರಿಸಿಕೊಳ್ಳಬೇಕು. ಹೊಟ್ಟೆತುಂಬ ಅನ್ನ, ಮೈತುಂಬ ಬಟ್ಟೆ, ತಲೆಗೊಂದಿಷ್ಟು ತಿಳುವಳಿಕೆ, ಇವುಗಳನ್ನು ಪ್ರತಿ ಒಬ್ಬರಿಗೂ ಒದಗಿಸಿಕೊಳ್ಳಬೇಕು. ಇವು ಮೊದಲಕೆಲಸಗಳು. ಆ ಮೇಲೆ

ಎಲ್ಲರಿಗೂ ತಂಗುವುದಕ್ಕೆ ಸರಿಯಾದ ಆಸರ. ಆ ಆಸರದಲ್ಲಿ ನಿರ್ಭಯ ವಾಗಿ ಇರುವುದಕ್ಕೆ ಅನುಕೂಲತೆ. ಸರ್ವರಿಗೂ ಉದ್ಯೋಗ, ಇವಿಷ್ಟೇ ಸರಿಪಡಬೇಕಾದರೆ ಭಾರತವು ಒಳದೇಶ-ಹೊರದೇಶಗಳೊಡನೆ ಸರಿಯಾದ ನಿಲುವನ್ನಿಟ್ಟುಕೊಂಡು ವ್ಯವಹರಿಸಬೇಕಾಗುತ್ತದೆ. ಆ ಬಳಿಕ ಜಾಗತಿಕ ಪ್ರಶ್ನೆಗಳಾದ ಯುದ್ಧ, ವ್ಯಾಪಾರ, ಸೇನೆ ಮೊದಲಾದವುಗಳನ್ನು ನಿಟ್ಟಿಸ ಬೇಕಾಗುತ್ತದೆ. ಭಾರತವು ತನ್ನಷ್ಟಕ್ಕೆ ವಿಚಾರಿಸುತ್ತದೆಯೆಂದರೂ ಅದು ಜಗತ್ತನ್ನು ಬಿಟ್ಟಿರಲಾರದು. ಜಾಗತಿಕಕಾರ್ಯ ಕೈಕೊಂಡಿ ತೆಂದರೂ ಅದು ತನ್ನ ಸ್ವಂತದ ಕಾರ್ಯಬಿಡಲಾರದು. ಬಿಡಲಾರದೆಂದರೆ ಬಿಟ್ಟಂತೆ ಆಗಲಾರದೆಂದೇ ಅರ್ಥ!

ಜಗತ್ತಿನಲ್ಲಿ ಸ್ವತಂತ್ರರಾಷ್ಟ್ರಗಳು ಮಾಡುತ್ತಿರುವುದೇನು? ಬೇರೊಂದು ದುರ್ಬಲರಾಷ್ಟ್ರವನ್ನು ಕಾಲಕೆಳಗೆ ಹಾಕಿ ರಾಜ್ಯವನ್ನು ಹಬ್ಬಿ ಸುವುದು. ಇಲ್ಲವೆ ಬೇರೊಂದು ರಾಷ್ಟ್ರವನ್ನು ಹೆದರಿಸಿ ಅಲ್ಲಿ ತನ್ನ ಬೇಳೆ ಯನ್ನು ಬೇಯಿಸಿಕೊಳ್ಳುವುದು. ಮಹಾದೇಶಭಕ್ತಿಯಿಂದ ಪ್ರೇರಿತವಾಗಿ ತನ್ನ ಕಲ್ಯಾಣದ ಉಪಾಯಗಳನ್ನು ಪರರು ಅನುಸರಿಸುವಂತೆ ಪ್ರಯತ್ನಿ ಸುವುದು. ಅದಕ್ಕೆ ತಡೆಯಾದವರನ್ನು ಹಣಿಯುವದು. ಹಣಿಯುವ ಕೆಲಸವು ಯಶಸ್ವಿಯಾಗಿ ನೆರವೇರುವುದಕ್ಕೆ ಭೌತಿಕವಿಜ್ಞಾನದ ಸಹಾಯ ಪಡೆಯುವದು. ವಿಧ್ವಂಸಕ ವಸ್ತುಗಳನ್ನು ಸಿದ್ಧಗೊಳಿಸುವದು. ಆ ಕೆಲಸಕ್ಕಾಗಿ ರಾಷ್ಟ್ರದ ಸಂಪತ್ತನ್ನೆಲ್ಲ ಸೂರೆಗೊಳಿಸುವುದು. ಈ ಎಲ್ಲ ಕಾರ್ಯಕಲಾಪಗಳೆಂದರೆ ಸ್ವತಂತ್ರರಾಷ್ಟ್ರಗಳು ನೆರವೇರಿಸಬಹುದಾಗಿರುವ ಕರ್ತವ್ಯಗಳಾಗಿವೆ. ಇವುಗಳ ಹಿನ್ನೆಲೆ–ಮುನ್ನೆಲೆಗಳಾಗಿ ಸ್ವಜನರ ಕಲ್ಯಾಣಕ್ಕಾಗಿಯೂ ಸ್ವದೇಶದ ಮಂಗಲಕ್ಕಾಗಿಯೂ ಅಷ್ಟಿಷ್ಟೋ ಸುಧಾ ರಣೆಯ ಕಾರ್ಯಗಳನ್ನು ಕೈಕೊಳ್ಳುತ್ತವೆ. ಆದರೆ ಸ್ವಾತಂತ್ರ್ಯದಿಂದ ಜಾಗ್ರತಗೊಂಡ ಭಾರತದ ದಾರಿಯೇ ಬೇರೆ. ಅದರ ಗುರಿಯೇ ಬೇರೆ.

**" ಇಲ್ಲಿಯ ಜಾಗ್ರತಿಯು ಹಿಂಸ್ರಪಶುವಿನ ಜಾತಿಗೆ ಸೇರತಕ್ಕು ದಾಗಿಲ್ಲವೆಂಬುದರಲ್ಲಿ ಸಂಶಯವಿಲ್ಲ. ಹಾಗೂ ಭಾರತಶಕ್ತಿಯ ನಿಜಸ್ವಭಾವ, ಕೃತಿ, ಸಾಮರ್ಥ್ಯಗಳನ್ನು ಕಂಡು ಜಗತ್ತು ದಿಗಿಲು**

**ಗೊಳ್ಳುವುದರಲ್ಲಿ ಸಂದೇಹವಿಲ್ಲ"** ಎಂದು ಶ್ರೀ ಅರವಿಂದರು ಭಾರತದ ಬಗ್ಗೆ ತಮ್ಮ ಭರವಸೆಯನ್ನು ಹೊರಪಡಿಸಿದ್ದಾರೆ. ಇದರಿಂದ ಭಾರತವು ಸ್ವಾರ್ಥಸಾಧನೆಗಾಗಿ ಇತರ ರಾಷ್ಟ್ರಗಳೊಡನೆ ಅಮಾನುಷವಾಗಿ ವರ್ತಿಸ ಲಾರದೆಂದು ಗ್ರಹಿಸಿಕೊಳ್ಳಲಿಕ್ಕೆ ಅಡ್ಡಿಯಿಲ್ಲ. ಅದು ಜಗತ್ತನ್ನೇ ಬೆರಗು ಗೊಳಿಸುವ ಗುಣಸಾಮರ್ಥ್ಯಗಳನ್ನು ಹೊರಪಡಿಸುವುದಾದರೆ ಅದು ಎಂಥದು, ಅದರ ಸುಳುಹುಹೊಳಹುಗಳೇನು, ಇವುಗಳನ್ನು ತಿಳಕೊಳ್ಳ ಬೇಕೆನ್ನುವ ಆಶೆಯಾಗುವುದು ಸಹಜವಾಗಿದೆ.

**"ಭಾರತದ ಜಾಗ್ರುತಿಯು – ನೂತನ ಜಗತ್ತಿನಲ್ಲಿಯೂ ಪರ ಕೀಯ ಪರಿಸ್ಥಿತಿಯಲ್ಲಿಯೂ ಕಣ್ತೆರೆದ ಒಂದು ಅದ್ಭುತಶಕ್ತಿಯು ಅಂಗಾಂಗಗಳಲ್ಲಿಯೂ ತನ್ನ ಪ್ರಾರಬ್ಧಕರ್ಮಬಂಧನಗಳಿಂದ ಹಾಗೂ ಪರಕೀಯರ ಪಾಶಗಳಿಂದ ಕಿರಿದಾಗಿ ಹಿರಿದಾಗಿ ಶೃಂಖಲಾಬದ್ಧ ವಾಗಿರುವುದನ್ನು ಕಂಡು ಅದರೊಳಗಿಂದ ಒದ್ದಾಡಿ ಬಿಡಿಸಿಕೊಂಡು ತನ್ನ ಉದ್ಘೋಷಣೆಯಿಂದ ಜಗತ್ತಿಗೆ ತನ್ನ ಮುದ್ರೆಯೊತ್ತ ಬೇಕೆಂದು ಎತ್ತಿಬರುವ ಸನ್ನಾಹದಚಿತ್ರವು ತೋರುವದು."** ಭಾರತದ ಜೀವನನಾಡಿಯು ಅಧ್ಯಾತ್ಮವಾಗಿರುವದರಿಂದ ಅದು ಜಗತ್ತಿಗೆ ಅಧ್ಯಾತ್ಮದ ಮುದ್ರೆಯನ್ನಲ್ಲದೆ ಇನ್ನೇನೂ ಒತ್ತಲಾರದು. ಆದರೆ ಆ ಮುದ್ರೆಗೆ ಜಗತ್ತು ತನ್ನ ಹಣೆಯನ್ನು ಮುಂದೊಡ್ಡಬೇಕಾದರೆ ಜಗತ್ತಿನ ಸಂಕಟವನ್ನು ಭಾರತವು ಬಿಡಿಸಬಲ್ಲದೆಂದು ಎಣಿಸಬೇಕಾಗುತ್ತದೆ.

ಈಗ ಜಗತ್ತಿನ ಪ್ರಮುಖರಾಷ್ಟ್ರಗಳಾದ ಇಂಗ್ಲಂಡ, ಅಮೇರಿಕಾ, ಫ್ರಾನ್ಸ ಮೊದಲಾದವುಗಳಿಗೂ ರಶಿಯ, ಜರ್ಮನಿ, ಜಪಾನ ಮೊದಲಾದ ವುಗಳಿಗೂ ಉದ್ದೇಶ–ಗುರಿಗಳು ಬೇರೆಬೇರೆಯಾಗಿವೆ. ಪರಸ್ಪರವಿರುದ್ಧ ವಾದವುಗಳಾಗಿವೆ. ಈ ಮಾತು ತೋರಿಕೆಯಲ್ಲಂತೂ ಕಂಡು ಬರುತ್ತಲೇ ಇದೆ. ಆದರೂ ಆವೆಲ್ಲ ರಾಷ್ಟ್ರಗಳ ಅಂತರಂಗಕ್ಕೆ ಬೇಕಾದುದು ನಿಜ ವಾಗಿಯೂ ಶಾಂತಿ. ಹಾಗೆ ಬೇಕಾದ ಶಾಂತಿಯನ್ನು ಗಳಿಸುವ ವಿಚಾರ ಗಳು ಹೊಂದುಗೂಡುತ್ತಲಿದ್ದರೂ ಅದನ್ನು ಸಾಧಿಸುವ ಉಪಾಯಗಳು ತಪ್ಪುತ್ತಲಿವೆ. ಉಪಾಯಗಳು ಬೇರೆಬೇರೆಯಾಗಿರುವುದರಿಂದ ಉಭಯ

ರಾಷ್ಟ್ರಗಳಲ್ಲಿ ಇಬ್ಬಣವೂ ಹೋರಾಟವೂ ಪೈಪೋಟಿ ನಿಲ್ಲುತ್ತವೆ. ಅದ ಕ್ಕಾಗಿ ಯುದ್ಧಸಿದ್ಧತೆಗೆ ತೊಡಗಬೇಕಾಗುತ್ತದೆ; ಅದರೊಂದಿಗೆ ಕ್ರೂರ ಕೊಲೆ-ಹಿಂಸೆಗಳನ್ನು ನಡೆಸಬೇಕಾಗುತ್ತದೆ. ಈ ಕೃತಿಗಳೆಲ್ಲ ಅವರವರ ದೃಷ್ಟಿಯಲ್ಲಿ ಸ್ವರಾಷ್ಟ್ರಕಾರ್ಯಗಳೆಂದೇ ಎನಿಸುತ್ತವೆ; ಅವು ಅವರಿಗೆ ವಿಶ್ವಕಲ್ಯಾಣಸಾಧನೆಗಳೆಂದೂ ತೋರುತ್ತವೆ. ಜಗತ್ತಿನ ಬಹುಜನರು ಮುಂದಾಳಾಗಿ ಇಲ್ಲವೆ ಹಿಂದೆನಿಂತು ಈ ಉದ್ದಿಮೆಯಲ್ಲಿ ತೊಡಗಿದ್ದಾರೆ. ಅದರಿಂದ ಉತ್ಪಾದಕ ಕಾರ್ಯಗಳು ಕಟ್ಟಾಗಿರುವವು. ಅದರ ಫಲವಾಗಿ ಆಹಾರಧಾನ್ಯದ ಕೊರತೆಯು ಭರದಿಂದ ಹೆಚ್ಚಾಗಹತ್ತಿರುವದು. ಈ ಎಲ್ಲ ತೊಡಕುಗಳನ್ನು ಭಾರತವು ಬಿಡಿಸಿಕೊಡಬಹುದಾಗಿದೆ.

**“ ಭಾರತವು ಹಾಗೆ ಸಂಕಲ್ಪಮಾಡಿದ್ದಾದರೆ ಯಾವ ತೊಡಕುಗಳನ್ನು ದಾಟಲು ಮಾನವಜಾತಿಯೇ ತಿಣಕಿತಡವರಿಸುತ್ತಿದೆಯೋ ಅವುಗಳನ್ನು ಲೀಲಾಜಾಲವಾಗಿ ಬಿಡಿಸಿ ಮಾಲೆಗಳಾಗಿ ಮಾಡಿಕೊಳ್ಳಬಹುದು. ಅದರ ಪ್ರಾಚೀನ ಜ್ಞಾನನಿಧಿಯಲ್ಲಿ ಎಲ್ಲ ಸಮಸ್ಯೆಗಳನ್ನೂ ಬಿಡಿಸುವ ಹಂಚಿಕೆ ಹೇಳಿದೆ. ”**

ಭಾರತದ ಪ್ರಾಚೀನ ಜ್ಞಾನನಿಧಿಯಲ್ಲಿ ಬೇಕಾದ ಹಂಚಿಕೆಗಳಿರ ಬಹುದು. ಆದರೆ ಆ ಹಂಚಿಕೆಗಳನ್ನು ಭಾರತವು ಈಗ ಅನುಭವದಿಂದ ಅರವಡಿಸಿಕೊಂಡಿರುವದೇ? ಅದು ಜಗತ್ತಿನಲ್ಲಿ ವರ್ಚಸ್ಸಿನಿಂದ ಪರಿಣಾಮ ಕಾರಿಯಾಗುವಂತೆ ಆ ಅನುಭವವನ್ನು ಹೇಳಬಲ್ಲದೇ? ಹಾಗೆ ಹೇಳುವ ಸಾಮರ್ಥ್ಯವು ಭಾರತಕ್ಕೆ ಬರಬಹುದೇ? ಜಗತ್ತು ಭಾರತದ ಹಂಚಿಕೆ ಗಳನ್ನು ಕೇಳಿಕೊಳ್ಳುವುದಕ್ಕೆ ತಲೆತಗ್ಗಿಸಬಹುದೇ?— ಈ ಮೊದಲಾದ ಸಂಶಯಗಳು ತಲೆದೋರಬಹುದಾಗಿದೆ. ಇವುಗಳಿಗೆ ನಾವು ಹೇಳುವ ಸಮಾಧಾನಗಳು ತಳಬುಡವಿಲ್ಲದ ಕಲ್ಪನೆಗಳೆನಿಸಬಲ್ಲವು. ಇತಿಹಾಸ ಬಲ್ಲವರು ಹೇಳುವ ಸಮಾಧಾನವು ತ್ರೈರಾಶಿಕ ಪದ್ಧತಿಯದಾಗಬಲ್ಲದು. ಆದರೆ ಇತಿಹಾಸವನ್ನೇ ನಿರ್ಮಿಸುವ ಸಾಮರ್ಥ್ಯವುಳ್ಳ ಯೋಗೀಶ್ವರರು ಮಾತ್ರ ತ್ರಿಕಾಲಸತ್ಯವಾದ ಸಮಾಧಾನವನ್ನು ಹೇಳಬಲ್ಲರು. ಯೋಗೀ ಶ್ವರರಾದ ಶ್ರೀ ಅರವಿಂದರು ಈ ವಿಷಯದಲ್ಲಿ ಸಾರಿಹೇಳುವದೇನಂದರೆ—

**“ಭಾರತಶಕ್ತಿಯು ಹಲವು ಬಗೆಯಲ್ಲಿ ಅಪೂರ್ವವಾದದ್ದು. ಅದರ ವ್ಯಕ್ತಿಧರ್ಮವು ಇದುವರೆಗೂ ಮಾನವಜಾತಿಯನ್ನು ರೂಪಿಸುತ್ತಿರುವ ಹಾಗೂ ಆಳುತ್ತಿರುವ ಸತ್ವಕ್ಕಿಂತಲೂ ತೀರಭಿನ್ನವಾಗಿದೆ. ಆದರೂ ಬರುವಕಾಲದಲ್ಲಿ ಪ್ರಭುತ್ವವನ್ನು ಪಡೆಯಬಲ್ಲ ಸತ್ವಕ್ಕೆ ಸಮೀಪವಾಗಿದೆ.”**

ಹೀಗೆ ಭಾರತವು ಆದರ್ಶಸಮಾಜವುಳ್ಳ ರಾಷ್ಟ್ರವಾಗಬೇಕಾದರೆ ಅದಿನ್ನೂ ಗಳಿಸಿಕೊಳ್ಳಬಹುದಾದುದು ಬಹಳವಿದೆ. ನಾಳೆ ಭಾರತವು ಕಟ್ಟಿಕೊಳ್ಳಲಿರುವ ಸಮಾಜವು ದೇವಸಂಘವೆನಿಸುವದಂತೆ ! ಆ ದೇವ ಸಂಘಕ್ಕೆ ಜಗನ್ನಾಥನ ರಥವೆಂಬ ಹೆಸರು, ಜಗನ್ನಾಥನೇ ಕುಳಿತು ನಡೆಯಿಸುವ ರಥಕ್ಕೆ ನಾಲ್ಕುಗಾಲಿಗಳು ಬೇಕು. **ಸ್ವಾತಂತ್ರ್ಯ, ಐಕ್ಯ, ಜ್ಞಾನ, ಶಕ್ತಿ ಇವೇ ನಾಲ್ಕು ಗಾಲಿಗಳು**. ಅರ್ಧಮರ್ಧವಾಗಲಿ ಹರಕುಮುರಕಾಗಲಿ ಸಿಕ್ಕಿದ್ದು ಸ್ವಾತಂತ್ರ್ಯವೆಂದೇ ಇಟ್ಟುಕೊಳ್ಳೋಣ. ಆದರೇನು? ಇನ್ನು ಐಕ್ಯ, ಜ್ಞಾನ, ಶಕ್ತಿಗಳನ್ನು ಅದು ಸಿದ್ಧಿಸಿಕೊಳ್ಳಬೇಕಾಗಿದೆ. ಪರಮಾತ್ಮನು ನಡೆಯಿಸಿಕೊಂಡು ಹೊರಟಿರುವನಾದ್ದರಿಂದ ಇನ್ನುಳಿದ ಸಾಧನೆಗೂ ಸಿದ್ಧಿಗೂ ನಾವೆಣಿಸಿರುವಷ್ಟು ಕಾಲವು ಬೇಕಾಗಲಿಕ್ಕಿಲ್ಲ. ಹಿಂದೆ ವಂಗಭಂಗದ ಕಾಲದಲ್ಲಿ ರಾಷ್ಟ್ರಸಭೆಯ ಕಾರ್ಯವು ನಾಲ್ಕಾರು ವರುಷಗಳಲ್ಲಿ ಅದೆಷ್ಟು ಸಾಧಿಸಿತೆಂಬುದನ್ನು ಸ್ಮರಿಸಬೇಕು. ಮ. ಗಾಂಧಿಯವರು ಆಂದೋಲನ ನಡೆಯಿಸಿದ ೨೦–೨೫ ವರುಷಗಳಲ್ಲಿ ಅದೆಂಥ ಅದ್ಭುತವು ಒದಗಿಬಂದು ನೂರುವರುಷಗಳ ಕಾಲಾವಧಿಯನ್ನು ದಾಟಿಹೋದಿವೆಂಬುದನ್ನು ಒಂದಿಷ್ಟು ನೆನೆಸಬೇಕು. ದೇವದೇವನ ಗುಪ್ತಹಸ್ತವು ಈ ಅಗಾಧ ಕಾರ್ಯವನ್ನು ಕೈಕೊಂಡಿದೆಯೆಂಬದನ್ನು ಭಾರತೀಯರಾದ ನಾವು ಮೊಟ್ಟಮೊದಲಿಗೆ ಲಕ್ಷ್ಯದಲ್ಲಿಡಬೇಕಾಗಿದೆ. ನಾವು ಪರಮೇಶ್ವರನ ಕೈಯೊಳಗಿನ ಯಂತ್ರವಾಗಿ ನಡೆಯುವಕಾಲ ಬಂದಾಗ ಬರಲಿ. ಆದರೆ ಅದಕ್ಕೂ ಮೊದಲು ಪರಮೇಶ್ವರಕಾರ್ಯಕ್ಕೆ ಆತಂಕವಾಗಿ ನಿಲ್ಲುವ ಅಪರಾಧ ಮಾಡುವಂಥ ಪ್ರಸಂಗತಪ್ಪಿದರೂ ಅದೇನು ಸಣ್ಣಪುಟ್ಟ ಮಾತಲ್ಲ.

# ಜಾಗತಿಕ ಕಾರ್ಯದ ಸ್ವರೂಪ



ಭಾರತವು ಮಾಡಲಿರುವ ಜಾಗತಿಕಕಾರ್ಯದ ಸ್ವರೂಪವನ್ನು ಹಿಂದುಗಡೆ ತಿಳಿಯೋಣ. ಮೊದಲಿಗೆ ಅನೇಕಶತಮಾನಗಳಿಂದ ಪರಾಧೀನತೆಯಲ್ಲಿ ಕೊಳೆತುನಾರುವ ಭಾರತವು ತನ್ನ ಉದ್ಧಾರವನ್ನು ತಾನು ಮಾಡಿಕೊಳ್ಳುವ ಬಲವಿಲ್ಲದಿರುವಾಗ ಜಾಗತಿಕಕಾರ್ಯಕ್ಕೆ ಕೈಹಾಕುವುದು ನಗೆಗೀಡು ಅಲ್ಲವೇ? ತಿರುಗಿ ಕೇಳಿದರೆ ಅಂಥ ಮಾತನ್ನಾಡುವುದು ಸಹ ಸಣ್ಣಬಾಯಿಯಿಂದ ದೊಡ್ಡತುತ್ತುನುಂಗುವ ಪ್ರಯತ್ನವೇ ಸರಿ. ಆದ ರಿಂದ ಭಾರತದ ಸ್ವೋದ್ಧಾರದ ಪ್ರಶ್ನೆಯನ್ನು ಇನ್ನಿಷ್ಟು ಸ್ಪಷ್ಟವಾಗಿ ಬಿಡಿಸಿಕೊಳ್ಳುವುದು ಒಳ್ಳೆಯದು. ಭಾರತೀಯರು ಪರಕೀಯರ ಆಡಳಿತಕ್ಕೆ ಒಳಗಾಗಿ ಪಾರತಂತ್ರ್ಯದ ಅಸಹ್ಯ ಸಂಕಟಗಳನ್ನು ಉಂಡಿದ್ದಾರೆ. ಶಕ್ತಿ ಸಂಪಾದನೆ ಮಾಡಿಕೊಟ್ಟ ಐತಿಹಾಸಿಕ ಘಟನೆಗಳನ್ನು ನಾವು ಕೆಲಮಟ್ಟಿಗೆ ಅಭ್ಯಸಿಸಿದ್ದೇವೆ. ಭಾರತವು ಪರಾಧೀನತೆಯ ವಿಪುಲವಾದ ಕಮ್ಮಟದಲ್ಲಿ ಬಹುಕಾಲ ಸಿಕ್ಕಿಕೊಂಡಿತ್ತು. ಅದು ಅಂತರ್ದೃಷ್ಟಿಯ ವಿವಿಧಪ್ರಯೋಗ ಗಳಿಂದ ಎಣಿಸಲಾರದಷ್ಟು ಅನುಭವಪಡೆದಿದೆಯೆನ್ನುವ ಮಾತೂ ಸುಳ್ಳಲ್ಲ. **"ಆ ಅಂತರ್ದೃಷ್ಟಿಯ ಪ್ರಯೋಗದಲ್ಲಿ ಯುಗಯುಗ ಗಳನ್ನು ಕಳೆದಿರುವುದರಿಂದಲೇ ಪಾರಮಾರ್ಥಿಕತೆ, ಪ್ರಬಲವಾದ ಯೌಗಿಕವೃತ್ತಿ, ಆನಂತ್ಯವನ್ನೇ ಕೈಸೆರೆಗೊಂಡು ಅದನ್ನು ಸೂರೆ ಗೊಳ್ಳಬೇಕೆಂಬ ಹಂಬಲ, ನಿರ್ಮೂಲವಾಗಲಶಕ್ಯವಾದ ಧರ್ಮ ಬುದ್ಧಿ, ಆದರ್ಶವಾದ, ಯೋಗ, ತತ್ವಜ್ಞಾನ ಮತ್ತು ಕಲೆಗಳ ನಿರಂತರವಾದ ಬಲ ಇವೆಲ್ಲವೂ ಭಾರತದ ಅಚ್ಚುಕಟ್ಟಿನಲ್ಲಿ ಸೇರಿ ಕೊಂಡಿವೆ"** ಯೆಂದು ಶ್ರೀ ಅರವಿಂದರ ಸಾಕ್ಷ್ಯವು ನಮಗೆ ಗೃಹಿತ ವೆಂದು ಇಟ್ಟುಕೊಳ್ಳಲು ಯೋಗ್ಯವಾಗಿವೆ.

ಭಾರತವು ಜಾಗತಿಕ ಕಾರ್ಯದಲ್ಲಿ ಕೈಹಾಕಬೇಕಾದರೆ ಅದು ಸವೆಯಲಾರದ ಶಕ್ತಿಯನ್ನು ಸಂಪಾದಿಸಲೇಬೇಕು. ಅಂತಹ ಶಕ್ತಿಯು ಭಾರತಕ್ಕೆ ಅಳವಡಬೇಕಾದರೆ ಅದು ಸ್ವತಂತ್ರವಾಗಬೇಕಾಗಿರುವುದು.

ಅದರಂತೆ ಅದು ಅಖಂಡವಾಗಿರುವುದೂ ತೀರ ಆವಶ್ಯಕವಾಗಿದೆ. ಪರಾಧೀನತೆಯಲ್ಲಿದ್ದ ಭಾರತವು ವಿಶ್ವಕಲ್ಯಾಣ ಮಾತೆತ್ತಿದರೆ ಅದು ನಗೆಗೀಡು ಆಗದಿರುವದೇ? ಇನ್ನು ತುಣುಕುಗೊಂಡ ಭಾರತವು ತುಣುಕಾಗಿಯೇ ಉಳಿದರೆ–

**"ಭಾರತವು ಅತಿಶಯವಾಗಿ ಅಶಕ್ತವಾಗುವದು. ಹೆಳವನಂತಾಗುವದು. ಯಾವಾಗಲೂ ದೇಶದಲ್ಲಿ ಯಾದವೀಕಲಹವನ್ನು ಉಳಿಸಿದಂತಾಗುವದು. ಹೊಸದಾಳಿಯೂ ಶಕ್ಯವಾಗಬಹುದು. ಅಲ್ಲದೆ ಪರರಾಷ್ಟ್ರಗಳು ಭಾರತವನ್ನು ಆಕ್ರಮಿಸಲೂಬಹುದು. ಆದ್ದರಿಂದ ತುಣುಕುಗೊಂಡ ಭಾರತವು ಇಡಿಯದಾಗಲೇಬೇಕು. ದ್ವೇಷವು ಕಡಿಮೆಯಾದಂತೆ ಶಾಂತತೆ ಹಾಗೂ ಸಾಮರಸ್ಯಗಳ ಅರಿವು ಹೆಚ್ಚುಹೆಚ್ಚು ಬೆಳೆದು ಬಂದಂತೆ ಪರಸ್ಪರ ಸಹಕಾರದಿಂದ ಕೈಕೊಳ್ಳಲೇಬೇಕಾದ ಕಾರ್ಯಕ್ರಮಗಳು ಮೇಲಿಂದ ಮೇಲೆ ಒದಗಿದಂತೆ ಒಂದು ಪ್ರಕಾರದ ಐಕ್ಯಸಂಘಟನೆಯನ್ನು ಒಪ್ಪಂದದ ಮೂಲಕವಾಗಿ ಸಹ ದೃಢಗೊಳಿಸಬೇಕಾಗುವದು. ಹೀಗಾಗಿ ಯಾವುದೇ ರೂಪದಲ್ಲಿ ಒಕ್ಕಟ್ಟು ಉಂಟಾಗಬಹುದು. ಯಾವುದೇ ರೀತಿಯಲ್ಲಾದರೂ ಈ ಕೃತ್ರಿಮವಿಭಜನೆಯು ಹೋಗಲೇಬೇಕು. ಅದು ಹೋಗಿಯೇ ಹೋಗುವದು. ಇಲ್ಲದಿದ್ದರೆ ಭಾರತದ ಭವಿತವ್ಯವೇ ಕುಗ್ಗುವದು. ಅದರ ಈಶ ಸಂಕಲ್ಪಿತ ಕರ್ತವ್ಯವು ಸಿದ್ಧಿಸದೆ ಹೋಗಬಹುದು."**

ಒಟ್ಟಾರೆ ಸ್ವತಂತ್ರಭಾರತವು ಸಾಧಿಸುವ ಕ್ರಾಂತಿಕಾರ್ಯವೆಂದರೆ ಭಾರತದ ಅಖಂಡತೆ ಮತ್ತು ಐಕ್ಯ ಅದರ ಎರಡನೇ ಕಾರ್ಯವೆಂದರೆ ಏಶಿಯದ ಬಂಧವಿಮೋಚನೆ, ಹಾಗೂ ಮಾನವ ಸಂಸ್ಕೃತಿಯ ಪ್ರಗತಿಯಲ್ಲಿ ಹಿಂದೆವಹಿಸಿದ ಮಹತ್ವದ ಪಾತ್ರವನ್ನು ಮತ್ತೊಮ್ಮೆ ವಹಿಸುವುದು. ಮೂರನೇದಾಗಿ ವೈಯಕ್ತಿಕ ಪರಿಪೂರ್ಣತೆಯ ದಾರಿಯಲ್ಲಿ ಮಾನವನ ಚಿತ್‌ಶಕ್ತಿಯು ಒಂದು ಹೊಸಹೆಜ್ಜೆಯನ್ನಿಟ್ಟು ವಿಕಾಸಮಾರ್ಗದಲ್ಲಿ ಮೇಲ್ಮಟ್ಟ ಮುಟ್ಟುವುದು.

ಈ ಮೂರು ಮಹಾಕಾರ್ಯಗಳಲ್ಲಿ ಮೊದಲನೆಯದಾದ ಭಾರತದ ಅಖಂಡತೆಯನ್ನು ಸಾಧಿಸುವುದಕ್ಕೆ ದ್ವೇಷಬುದ್ಧಿಯು ಕಡಿಮೆ ಯಾಗ ಬೇಕೆಂದೂ ಶಾಂತಿಸಾಮರಸ್ಯಗಳ ಅರಿವು ಹೆಚ್ಚುಹೆಚ್ಚು ಬೆಳೆದು ಬರ ಬೇಕೆಂದೂ ಪರಸ್ಪರಸಹಕಾರದಿಂದ ಮೇಲಿಂದ ಮೇಲೆ ಕಾರ್ಯಕ್ರಮ ಗಳನ್ನು ಕೈಕೊಳ್ಳಬೇಕೆಂದೂ ಸೂಚಿಸಲಾಗಿದೆ. ಇನ್ನು, ಏಶಿಯದ ಬಂಧವಿಮೋಚನೆಯ ಕಾರ್ಯದಲ್ಲಿ ಈಗಾಗಲೇ ಭಾರತವು ವಹಿಸಿದ ಪಾತ್ರವು ತೋರಿಸುತ್ತಿರುವ ಉತ್ಸಾಹವನ್ನೂ ಸಾಮರ್ಥ್ಯವನ್ನೂ ನೋಡಿ ದರೆ ಅದು ತಕ್ಕ ಸ್ಥಾನಮಾನಗಳನ್ನು ಗಳಿಸದೆ ಇರಲಾರದೆಂದು ತೋರುತ್ತದೆ.

**“ಭಾರತದ ಪುನರುಜ್ಜೀವನವು ಬರೀ ತನ್ನ ಭೌತಿಕ ಆಸ್ಥೆ ಗಳನ್ನು ಪೂರಯಿಸಿಕೊಳ್ಳುವುದಕ್ಕೆ ಮಾತ್ರ ಅಲ್ಲ. ರಾಜ್ಯವಿಸ್ತಾರ, ಘನತೆ, ಶಕ್ತಿ, ಸಮೃದ್ಧಿಗಳ ಮಟ್ಟಿಗೂ ಅಲ್ಲ. ಪರಕೀಯರ ಮೇಲೆ ತನ್ನ ಆಧಿಪತ್ಯವನ್ನು ಹೇರುವುದಕ್ಕಂತೂ ಅಲ್ಲವೇ ಅಲ್ಲ. ಆದರೆ ಅಖಿಲ ಮಾನವ ಕೋಟಿಯ ಧುರೀಣತೆಯನ್ನು ವಹಿಸಿ ಜಾಗತಿಕ ಕಲ್ಯಾಣಕ್ಕಾಗಿ ವಿಶ್ವನಿಯಾಮಕನ ಸಂಕಲ್ಪಸಿದ್ಧಿಯಲ್ಲಿ ಸಹಕರಿಸು ವುದೇ ಭಾರತದ ಪುನರುಜ್ಜೀವನದ ಉದ್ದೇಶವಾಗಿದೆ.”**

ಈ ಮಾತನ್ನು ಮನದಂದರೆ ಚಿಕ್ಕಪುಟ್ಟ ರಾಷ್ಟ್ರಗಳ ಸ್ವಾತಂತ್ರ್ಯವು ಇನ್ನು ಮುಂದೆ ಸುರಕ್ಷಿತವಾಗಿ ಉಳಿಯುವುದಕ್ಕೂ, ದೊಡ್ಡದೊಡ್ಡ ರಾಷ್ಟ್ರಗಳು ಸಹ ಸುಭದ್ರವಾಗಿ ನಿಲ್ಲುವುದಕ್ಕೂ ಮಾನವೀಯ ಐಕ್ಯವು ಅನಿವಾರ್ಯವಾಗಿದೆ. ಈ ಉದ್ದೇಶದ ಸಲುವಾಗಿಯೂ ಭಾರತವು ಒಂದುಗೂಡಲೇಬೇಕು. ಈ ಕಾರ್ಯಕ್ಕೆ ಮಾನವನ ತಿಳಿಗೇಡಿತನವೂ ಹುಚ್ಚುಸ್ವಾರ್ಥವೂ ತಡೆಯನ್ನುಂಟು ಮಾಡಬಹುದು. ಆದರ ವಿರುದ್ಧ ವಾಗಿ ದೇವಪ್ರಯತ್ನವು ಸಹ ವ್ಯರ್ಥವಾಗುವದುಂಟೇ೦ದು ಹೇಳುತ್ತಾರೆ. ಈ ದೃಷ್ಟಿಯಿಂದ ಭಾರತವು ಜಗತ್ತಿನ ವಿವಿಧಜನಾಂಗಗಳ ರಾಷ್ಟ್ರೀಯ ಜೀವನದ ವಿವಿಧತೆಯನ್ನು ಉಳಿಸಿಕೊಂಡು ಅವುಗಳನ್ನೆಲ್ಲ ಒಂದೇ ಸಾಮರಸ್ಯವುಳ್ಳ ಐಕ್ಯದಲ್ಲಿ ಹೆಣೆಯಬಲ್ಲದೆಂದೂ ಅದರಿಂದ ಅಂತ

ರ್ರಾಷ್ಟ್ರೀಯ ಏಕೀಕರಣವನ್ನು ಸಾಧಿಸಿ ಆ ತಳಹದಿಯ ಮೇಲೆ ಒಂದು ನವೀನವಾದ ಮಹತ್ತರವಾದ ಉಜ್ವಲವಾದ ಉದಾತ್ತಜೀವನವನ್ನು ಅಖಿಲಮಾನವತೆಯ ಸಲುವಾಗಿ ರಚಿಸುವವೆಂದೂ ಹೇಳುತ್ತಾರೆ. ಅದಕ್ಕೆ ಆಧ್ಯಾತ್ಮಜ್ಞಾನವೂ ಆಧ್ಯಾತ್ಮಿಕ ಪರಿವರ್ತನವೂ ಮಾನವ ಕುಲಕ್ಕೆ ದೊರಕೊಳ್ಳಬೇಕಾಗುತ್ತವೆ. ಅದನ್ನು ಕೊಡಮಾಡುವ ಸಾಮರ್ಥ್ಯವು ಭಾರತದಲ್ಲಿ ಮಾತ್ರ ಅದೆ. ಆ ಕಾರ್ಯಕ್ಕೆಂದೇ ಭಾರತವನ್ನು ಪರಮೇಶ್ವರನು ಈ ಕೆಲವೊಂದು ಯುಗಗಳಿಂದಲಾದರೂ ಕಾದಿರಿಸಿದ್ದಾನಂತೆ.!

ಈಗಾಗಲೇ ಭಾರತವು ತನ್ನ ಆಧ್ಯಾತ್ಮದ ಕಾಣಿಕೆಯನ್ನು ಜಗತ್ತಿಗೆ ಕೊಡಲಾರಂಭಿಸಿದೆ. ಅದು ಹೆಚ್ಚುಹೆಚ್ಚಾಗಿ ಯುರೋಪ-ಅಮೇರಿಕೆಗಳಲ್ಲಿ ಪ್ರವೇಶಿಸುತ್ತಲಿದೆ. ಈ ಉತ್ಕ್ರಾಂತಿಯಾಗಬೇಕಾದರೂ ಆಧ್ಯಾತ್ಮ ವೃತ್ತಿಯೂ ಅಂತಃಪ್ರಜ್ಞೆಯೂ ವಿಕಾಸಗೊಳ್ಳಬೇಕು ಅದು ಸಹ ಭಾರತದಿಂದಲೇ ಸಾಧ್ಯವಂತೆ. ಈ ಸಾಧನವು ಜಗದಗಲವಾಗಿ ಸಾಗಬೇಕಾಗಿದ್ದರೂ ಅದರ ಶಕ್ತಿಯ ಕೇಂದ್ರವು ಭಾರತದಲ್ಲಿಯೇ ಆಗಬಲ್ಲದೆಂದು ಶ್ರೀ ಅರವಿಂದರು ಎದೆತಟ್ಟಿ ಹೇಳುತ್ತಾರೆ. ಶಕ್ತಿಕೇಂದ್ರವು ಭಾರತವಾದರೂ ಅದರ ಪ್ರಯೋಗಶಾಲೆ ಬಂಗಾಲವೆಂದು ನಮಗೆ ನೂರಾರು ವರುಷಗಳ ಚರಿತ್ರೆಯಿಂದ ಕಂಡುಬರುತ್ತಿದೆ. ಬಂಗಾಲವು ಭಾರತದ ಮುದುಳೆಂದು ಹೊಗಳಿದವರು ಶ್ರೀ ಅರವಿಂದರೆಂದ ಮಾತ್ರಕ್ಕೆ ಅವರು ತಮ್ಮ ಹುಟ್ಟುನಾಡಿನ ಅಭಿಮಾನದಿಂದ ಹಾಗೆ ಹೊಗಳಿದರೆಂದು ತಿಳಿಯಬಾರದು. ಉಳಿದ ಎಷ್ಟೋ ವಿಷಯಗಳಂತೆ ಈ ವಿಷಯದಲ್ಲಿಯೂ ಬಂಗಾಲವೇ ಭಾರತದ ಶಸ್ತ್ರಪರೀಕ್ಷೆಯ ಮೂಸೆಯೆಂದೂ ಪ್ರಥಮಕರ್ಮಶಾಲೆಯೆಂದೂ ಅವರು ಸಾರಿದ್ದಾರೆ. **“ಬಂಗಾಲವು ತನ್ನ ಪ್ರಾಥಮಿಕ ರೂಪವನ್ನೂ ಪ್ರೇರಣೆಗಳನ್ನೂ ಅರಳಿಸಿ ಹೊಸ ವರ್ಚಸ್ಸಿನ ರೀತಿಗಳಿಗೆ ಪೂರ್ಣಪ್ರಾಣವನ್ನು ತುಂಬಿ ಭಾರತಶಕ್ತಿಯು ಈ ಪ್ರಾಂತದಲ್ಲಿ ನೋಡಬೇಕೆಂದು ಮಾಡಿದ್ದಾಳೆ.”** ಎಂದು ನುಡಿದಿದ್ದಾರೆ. ಈ ಮಾತು ಅಲ್ಲಿ ತಂಡತಂಡವಾಗಿ ಹುಟ್ಟಿಬರುತ್ತಿರುವ ಅದ್ಭುತಪುರುಷರು ಅವರು ಕೈಕೊಂಡು ನೆರವೇರಿಸಿದ ವಿವಿಧಕಾರ್ಯಗಳು, ಅಲ್ಲಿ ಹುಟ್ಟಿಬರುತ್ತಿರುವ ಸಾಹಿತ್ಯದ ಒಳಗಿನ ಜೀವಕಳೆ ಇವುಗಳಿಂದ ಸ್ಪಷ್ಟವಾಗುತ್ತದೆ.

ಭೌತವಿಜ್ಞಾನವು ಭಾರತಕ್ಕೆ ಅನ್ಯವಾದರೂ ಬಂಗಾಲವು ಅದರಲ್ಲಿ ಸಾಧಿಸಿದ ಪ್ರಗತಿಯನ್ನು ಕ್ಷಣಹೊತ್ತು ನಮ್ಮ ವಿಚಾರದ ತೆರೆಯ ಮುಂದೆ ತಂದುಕೊಂಡು ನಿರೀಕ್ಷಿಸಬೇಕು. ಅಂದರೆ ಈ ಮಾತಿನ ಸತ್ಯಾಸತ್ಯತೆಯು ಮನವರಿಕೆಯಾಗುವದು. ಹಾಗೂ ಅಲ್ಲಿ ಭಾರತವು ನೆರವೇರಿಸ ಬಹುದಾದ ಜಾಗತಿಕ ಕಾರ್ಯದ ಶಕ್ಯತೆಯು ಮನದಟ್ಟಾಗುವದು.

---

# ದಿವ್ಯರಾಜ್ಯದ ಮಾನವಕೋಟಿ



ಭಾರತವು ಕೈಕೊಳ್ಳಬಹುದಾದ ಜಾಗತಿಕ ಕಾರ್ಯದ ಸ್ವರೂಪವನ್ನು ಅರಿತುದಾಯಿತು. ಆ ಕಾರ್ಯವನ್ನು ಸಾಧಿಸುವುದಕ್ಕಾಗಿ ಭಾರತವು ಮೂರು ನಿಟ್ಟುಗಳಲ್ಲಿ ಹೋರಾಡಬೇಕಾಗಿದೆ. ಆ ಮೂರೂ ನಿಟ್ಟಿನಲ್ಲಿ ದೊರೆಯಬಹುದಾದ ಜಯದ ಮಾನದಿಂದ ಮಾನವ ಕುಟುಂಬದ ಭವಿತವ್ಯಕ್ಕೆ ಭಾರತದಿಂದ ಸಹಾಯದೊರೆಯಬೇಕಾಗಿದೆಯಂತೆ, ಆದುದರಿಂದ ಆ ಮೂರು ನಿಟ್ಟಿನ ಕೆಲಸಗಳನ್ನು ಅರಿತುಕೊಳ್ಳುವುದು ಆವಶ್ಯಕವಾಗಿದೆ. ಮೊದಲನೇ ಕೆಲಸ ಯಾವುದೆಂದರೆ–ಹಿರಿಯರು ಗಳಿಸಿಟ್ಟ ಆಧ್ಯಾತ್ಮಿಕಜ್ಞಾನವನ್ನೂ ಅನುಭವವನ್ನೂ ಒರಿಯ ತಿಳಕೊಂಡರೆ ಸಾಲದು ಅವರ ಗಾಢತೆ, ವೈಭವ, ಪೂರ್ಣತೆಗಳೊಂದಿಗೆ ತಿಳಕೊಳ್ಳುವುದು ತೀರ ಅಗತ್ಯವಾಗಿದೆ. ಆ ಬಳಿಕ ಎರಡನೇ ಕೆಲಸ ಯಾವುದೆಂದರೆ– ಆ ಆಧ್ಯಾತ್ಮಿಕಜ್ಞಾನವನ್ನು ಹೊಸರೂಪಗಳ ತತ್ವಜ್ಞಾನ, ಪದಾರ್ಥವಿಜ್ಞಾನ, ಸಾಹಿತ್ಯಕಲೆ, ವಿಮರ್ಶಕವಿಚಾರಗಳಲ್ಲಿ ಕ್ರಿಯಾತ್ಮಕವಾಗಿ ಹರಿಯುವಂತೆ ಮಾಡುವುದು. ಇನ್ನು ಎಲ್ಲಕ್ಕೂ ಬಿಗಿಯಾದ ಮೂರನೇ ಕೆಲಸ ಉಳಿಯಿತು. ಅದಾವುದೆಂದರೆ– ಭಾರತಶಕ್ತಿಯ ಬೆಳಕಿನಲ್ಲಿ ಆಧುನಿಕ ಸಮಸ್ಯೆಗಳನ್ನು ತಿಕ್ಕಿ ತೂಗಿ ಪರಮಾರ್ಥಪ್ರಧಾನವಾದ ಸಮಾಜದ ಸಿದ್ಧಿಗೆ ಬೇಕಾದ ವಿಶಾಲತರಸಮನ್ವಯವನ್ನು ವ್ಯವಸ್ಥೆಗೊಳಿಸಲು ಪ್ರತ್ಯೇಕವಾದ ಹೊಸಹವಣಿಕೆಗೆ ಹುರಿಯಾಗುವದು.

ಜಗತ್ತಿನ ಸರ್ವರ ಹಸಿವೆಯನ್ನು ತಣಿಸಬಲ್ಲ ಸಾಮರ್ಥ್ಯವು ಹಿರಿಯರು ಗಳಿಸಿದ ಜ್ಞಾನದ ಬುತ್ತಿಯಲ್ಲಿದೆಯೆಂದು ಈಗಾಗಲೇ ತಿಳಿದಿರುವೆವು. ಅದರ ಒಳಗುಟ್ಟನ್ನರಿತು ಅದನ್ನು ಉಂಡುನೋಡಿದವರು ಮೊದಲಿಗೆ ಬೇಕು. ಆ ಅಮೃತಾನ್ನವನ್ನು ಸವಿದವನು ಅದರ ಪ್ರಾಸಾದಿಕತೆಯನ್ನು ಅದರ ಪವಿತ್ರತೆಯನ್ನು ಬಾಳುವೆಯ ಎಲ್ಲ ವಿಭಾಗದ ತಿಳುವಳಿಕೆಯಲ್ಲಿಯೂ ಹರಿಯುವಂತೆ ಮಾಡಬೇಕಾಗಿದೆ. ಅಲ್ಲದೆ ಭಾರತದ ಪ್ರಾಚೀನಜ್ಞಾನದೃಷ್ಟಿಯಿಂದ ಹಾಗೂ ಅದರ ಅನುಭವದೃಷ್ಟಿಯಿಂದ ಇಂದಿನ ಸರ್ವತೊಡಕುಗಳನ್ನು ಬಿಡಿಸಿಕೊಡಬೇಕಾಗಿದೆ. ಶ್ರೀ ವಿವೇಕಾನಂದರು ಅಮೇರಿಕೆಯಲ್ಲಿ ಹಿಂದುಧರ್ಮವನ್ನು ಕುರಿತು ಮಾಡಿದ ಉಪನ್ಯಾಸವನ್ನು ಕೇಳಿದ ಅಲ್ಲಿಯ ಜನರು ಸ್ವಾಮಿಗಳ ಬಳಿಗೆ ಬಂದರು. ವಿನಯದಿಂದ ಬೊಗಸೆಯೊಡ್ಡಿ ತಮಗೆ ಹಿಂದುಧರ್ಮದ ದೀಕ್ಷೆಯನ್ನು ದಯೆಪಾಲಿಸಬೇಕೆಂದು ಬೇಡಿಕೊಂಡರು. ಸ್ವಾಮಿಗಳು ಆ ಮಾತಿಗೆ ಒಪ್ಪಿಕೊಳ್ಳಲಿಲ್ಲ. ಆ ಜನರಿಗೆ ಅವರು ತಿಳಿಹೇಳಿದ್ದು ಹೇಗೆಂದರೆ— ಹಿಂದುಧರ್ಮವು ಸತ್ಯವೂ ಜೀವಂತವೂ ಆಗಿರುವಂತೆ ಕ್ರಿಸ್ತಧರ್ಮವೂ ಸಹ ಸತ್ಯವೂ ಜೀವಂತವೂ ಆಗಿದೆ. ಅದನ್ನು ಅರಿತು ಆಚರಿಸಿ ನಮ್ಮ ಗುರುಗಳು ಮನಗಂಡಿದ್ದಾರೆ. ನಮಗೂ ಮನಗಾಣಿಸಿಕೊಟ್ಟಿದ್ದಾರೆ.

ಹಿಂದುಧರ್ಮವನ್ನು ಸ್ವಾನುಭವಕ್ಕೆ ತಂದುಕೊಂಡಂತೆ ಕ್ರಿಸ್ತಧರ್ಮವನ್ನೂ ಸ್ವಾನುಭವಕ್ಕೆ ತಂದುಕೊಂಡವರಾದ್ದರಿಂದ ಸ್ವಾಮಿಗಳು ಅಂಥ ಉದಾರವಾದ ತಿಳುವಳಿಕೆಯನ್ನು ಆ ಜನರಿಗೆ ಹೇಳಿದರು. ಇಂದು ಸಹ ಆಧ್ಯಾತ್ಮದ ಜ್ಞಾನಅನುಭವಗಳ ಒರೆಗಲ್ಲಿಗೆ ಜಗತ್ತಿನ ಸರ್ವಪ್ರಶ್ನೆಗಳನ್ನು ತಿಕ್ಕಿನೋಡಿದ ಸಿದ್ಧಪುರುಷರು ತಂಡತಂಡವಾಗಿ ಹೊರಬಿದ್ದು ಬಿಟ್ಟರೆ ಜಗತ್ತಿನೊಳಗಿನ ಗಲಬಲಿಗಳೆಲ್ಲವೂ ಅಡಗುವವು. ಎಲ್ಲೆಲ್ಲಿಯೂ ಶಾಂತಿ ಸಮಾಧಾನಗಳು ಕಾಣಿಸಿಕೊಳ್ಳುವವು. ಈ ಸಿದ್ಧಿಯನ್ನು ಜಗತ್ತಿಗೆ ಸಾಧಿಸಿಕೊಡುವುದೇ ಶ್ರೀ ಅರವಿಂದರ ಸಾಧನದ ರಹಸ್ಯವಾಗಿದೆ. ತಮಗೆ ಲಕ್ಷಗಟ್ಟಲೆ ಶಿಷ್ಯರು ಬೇಕಾಗಿಲ್ಲವೆಂದೂ **ಒಂದು ನೂರು ಜನರು ಕ್ಷುದ್ರ ಅಹಂಕಾರ ಶೂನ್ಯರಾದ ಪೂರ್ಣಮಾನವರು ಪರಮೇಶ್ವರನ ಯಂತ್ರಸ್ವರೂಪವಾಗಿ ಲಭಿಸಿದರೆ ಅಷ್ಟೇ ಸಾಕಾಗುವದೆಂದೂ**

ಅವರ ಹಾರಯಿಕೆ ಅದೆ. ಅಷ್ಟಕ್ಕಾಗಿಯಾದರೂ ತಮ್ಮ ಬಳಿಗೆ ಬಂದು ಶಿಷ್ಯತ್ವವಹಿಸಿಕೊಳ್ಳಿರೆಂದು ಅವರು ಆಶಿಪಡುವದಿಲ್ಲ. **"ನನ್ನ ಸ್ಪರ್ಶ ದಿಂದಲೇ ಜಾಗ್ರತರಾಗಲೊಲ್ಲರೇಕೆ, ಅಥವಾ ಇನ್ನಾರ ಸ್ಪರ್ಶ ದಿಂದಲೇ ಜಾಗೃತರಾಗಲೊಲ್ಲರೇಕೆ ಆದರೆ ಒಳಮುಗ್ಗುಲಿನಿಂದ ತಮ್ಮ ಸ್ವತಃದ ದೇವತ್ವವನ್ನು ಬೆಳಗಿಸಿಕೊಂಡು ಭಾಗವತ ಜೀವನ ವನ್ನು ಪಡೆದುಕೊಳ್ಳಿರಿ. ಇದೇ ನನ್ನ ಹಾರಯಿಕೆ. ಇಂಥ ಮನು ಷ್ಯರೇ ಈ ದೇಶವನ್ನು ಉದ್ಧರಿಸುವರು."** ಎಂದು ತಮ್ಮ ಅಪೇಕ್ಷೆ ಯನ್ನು ಹೊರಗೆಡವಿದ್ದಾರೆ.

ಇದೇನು? ಇಂಥ ಜನರೂ ಇಂಥ ದೇಶವೂ ಈ ಲೋಕದಲ್ಲಿ ಕಾಣಸಿಗುವವೇ? ಇವೆಲ್ಲ ಲಕ್ಷಣಗಳು ಪುರಾಣಗಳಲ್ಲಿ ಕೇಳುತ್ತಿದ್ದ ಸತ್ಯ ಯುಗದಲ್ಲಿ ಮಾತ್ರ ಕಂಡುಬರುತ್ತವೆ. ಇಂಥ ಮಾತುಗಳನ್ನು ನಂಬುವು ದಕ್ಕೆ ಬಣ್ಣದ ಹಣ್ಣುಗಳನ್ನು ತಿನ್ನುವವರೂ ಚಿತ್ರದ ಮಲ್ಲಿಗೆಯನ್ನು ಮೂಸುವವರೂ ಬೇಕಾಗುವರು. ಅಹುದು, ಬಣ್ಣದಹಣ್ಣುಗಳನ್ನು ತಿಂದು ತೇಗುತ್ತಲಿದ್ದೇವೆನ್ನುವವರೂ ಚಿತ್ರದ ಮಲ್ಲಿಗೆಯನ್ನು ಮೂಸುತ್ತ ಲಿದ್ದೇವೆನ್ನುವವರೂ ಇನ್ನು ನಾಳಿನ ಜಗತ್ತಿನಲ್ಲಿ ತುಂಬಾ ಕಾಣಸಿಗಬಹು ದಾಗಿದೆ. ಅಂಥವರು ಮೊದಲು ಭಾರತದಲ್ಲಿ ಹುಲುಸಾಗಿ ಕಾಣಿಸಿ ಕೊಳ್ಳಬೇಕಾಗಿದೆ.

ಅವರು ಜಗತ್ತಿನಲ್ಲಿ ನೆರವೇರಿಸಲಿರುವ ಕಾರ್ಯಪದ್ಧತಿ ಯಾವು ದೆಂದರೆ- **"ಮಾನವನು ತನ್ನ ನಿಜಾತ್ಮವಾದ ದೇವತ್ವವನ್ನು ಕಂಡು ಕೊಳ್ಳಲು ಪ್ರಪಂಚವೊಂದು ಪರಮಾರ್ಥದಗರುಡಿಮನೆಯಾಗುವ ಹಾಗೆ ಮೊದಲು ಮಾಡುವನು. ಆ ಮೇಲೆ ದೇವಧರ್ಮದ ಮೂರ್ತಿಮತ್ತಾದ ಆಚರಣೆಯ ರಂಗಸ್ಥಲವನ್ನಾಗಿ ಮಾಡುವನು. ಕೊನೆಗೆ ಮಾನವನ ದೈವೀಸಂಪತ್ತಿನ ಗುಣಗಳಾದ ಜ್ಯೋತಿ, ಬಲ, ಶಾಂತಿ, ಐಕ್ಯ, ಸಾಮರಸ್ಯಗಳನ್ನು ಅಳವಡಿಸಿಕೊಳ್ಳಲು ಮಾನವ ವಂಶವೇ ತನ್ನ ವಿಕಾಸಮಾರ್ಗದಲ್ಲಿ ಒಟ್ಟುಗೂಡಿ ಮುಂದರಿದು ಸೂರೆಗೊಳ್ಳಲಿರುವ ದಿವ್ಯರಾಜ್ಯವನ್ನಾಗಿ ಮಾಡುವನು."**

ಇಂಥ ದಿವ್ಯರಾಜ್ಯವೂ ಸತ್ಯಯುಗವೂ ಜಗತ್ತಿಗೆ ಬರುವ ಮೊದಲು ಅವು ಭಾರತದಲ್ಲಿ ಕಂಗೊಳಿಸುವವು. ಭಾರತದಲ್ಲಿ ಆ ಕೃಷಿಯೇ ನಡೆದಿದೆ. ಶ್ರೀ ಅರವಿಂದರೇ ಆ ಕೃಷಿಯನ್ನು ನಡೆಯಿಸುವ ಪರಮ ಸೂತ್ರಧಾರರು. ಸೂತ್ರಧಾರರು ಎದುರಿನಲ್ಲಿ ಕಾಣಿಸಿಕೊಂಡರೂ, ತೆರೆಯಲ್ಲಿ ಮರೆಗೊಳಿಸಿ ಕೊಂಡರೂ ಅವರು ಆ ಕಾರ್ಯವನ್ನು ನಡೆಯಿಸುತ್ತಲೇ ಇದ್ದಾರೆ. **ಆ ಕೃಷಿಯಲ್ಲಿ ಸಹಭಾಗಿಯಾಗುವದಕ್ಕಾಗಿಯೇ ಭಾರತವು ಪರಾಧೀನತೆಯೊಳಗಿಂದ ಬಿಡುಗಡೆಯಾಗಿ ನಿಂತಿದೆ.**

---

# ಸತ್ಯಯುಗದ ಸಮೃದ್ಧಿ-ಸಾಮರಸ್ಯಗಳು

ಭಾರತದೊಳಗಿನವಷ್ಟೇ ಅಲ್ಲ. ಇಡಿಯ ಜಗತ್ತಿನೊಳಗಿನ ಎಲ್ಲ ಗೊಂದಲಗಳು ಅಡಗಿ ಶಾಂತಿಸಮೃದ್ಧಿಗಳು ನೆಲೆಗೊಳ್ಳಬೇಕಾದರೆ ಮಾನವ ಏಕತೆಯು ಅತ್ಯಾವಶ್ಯಕವಾಗಿದೆ. ಆ ಮಾನವ ಏಕತೆಯು ಕಡೆಗೆ ಜಗತ್ತು ಸ್ವಾಭಾವಿಕವಾಗಿಯೇ ಮುಂದುವರಿಯುತ್ತ ಸಾಗಿದೆ. ಆ ಮುಂದುವರಿಕೆಯಲ್ಲಿ ಮಾನವನು ಜಯಶಾಲಿಯಾದರೆ ಅಲ್ಲಿ ಅವನಿಗೆ ಸತ್ಯಯುಗವೇ ಕಾಣಿಸಿಕೊಳ್ಳುತ್ತದೆ. ಸತ್ಯಯುಗದಲ್ಲಿ ಸಮೃದ್ಧಿ ಸಾಮರಸ್ಯಗಳು ಹಾಸುಹೊಕ್ಕಾಗಿ ಹೆಣೆದಿರುತ್ತವೆ. ಅಂಥ ಸಮೃದ್ಧಿ ಸಾಮರಸ್ಯಗಳು ಮೈವೆತ್ತು ಬರುವುದಕ್ಕೆ ಜಗತ್ತು ಇಂದು ನಡೆಯಿಸಿದ ಯಾವ ಖಟಾಟೋಪಗಳಿಂದಲೂ ಸಾಧ್ಯವಿಲ್ಲವೆಂದು ತೋರುತ್ತದೆ. ಪ್ರಮುಖ ರಾಷ್ಟ್ರಗಳು ನಡೆಯಿಸಿದ ಯಾವ ಮಾರ್ಪಾಡೂ ಯಶಸ್ವಿಯಾಗದಿರುವುದೇ ಆ ಮಾತನ್ನು ಸ್ಪಷ್ಟಪಡಿಸುತ್ತದೆ. ಈ ವಿಷಯದಲ್ಲಿ ಶ್ರೀ ಅರವಿಂದರ **“ ಯೋಗ ಮತ್ತು ಅದರ ಉದ್ದೇಶ ”** ಎಂಬ ಪುಸ್ತಕದಲ್ಲಿ ವಿವರಿಸಿದ್ದು ಏನಂದರೆ—

**“ ಸದ್ಯದ ಮಾನವಕೋಟಿಯಲ್ಲಿ ಸತ್ಯಯುಗದ ಸಮೃದ್ಧಿ ಸಾಮರಸ್ಯಗಳು ಒಡಮೂಡಬೇಕಾದರೆ ಹೊರಮುಗ್ಗುಲಿನ ಯಾವ**

**ಮಾರ್ಪಾಡುಗಳಿಂದಲೂ ಅದು ಸಾಧ್ಯವಿಲ್ಲ. ಒಳಗಿನ ಆಧ್ಯಾತ್ಮಿಕ ಸ್ಥಿತ್ಯಂತರಗಳಿಂದಲೇ ಅದು ಸಾಧ್ಯ. ಇದು ಹಿಂದುಸ್ತಾನದವರಿಂದಲೇ ಆಗುವದು. ಬಹುಯುಗಗಳಿಂದಲೂ ಈಶ್ವರನು ಭರತಖಂಡವನ್ನು ಯೋಗಭೂಮಿಯಾಗಿ ಕಾದಿಟ್ಟಿದ್ದಾನೆ. ಜಗತ್ ಕಲ್ಯಾಣದ ಕಾಲದಲ್ಲಿ ಹಿಂದುಸ್ತಾನದ ಯೋಗಿಗಳು ಬಹಿರಂಗದಲ್ಲಿ ಲೋಕಾಂತರಕ್ಕೆ ಬರುತ್ತಾರೆ. ಆದರೆ ಜಗತ್ತಿನ ದುರವಸ್ಥೆಯ ಕಾಲದಲ್ಲಿ ಅವರು ಗಿರಿದರಿಗಳಲ್ಲಿ ಸೇರಿಕೊಂಡು ಏಕಾಂತಮಗ್ನರಾಗಿರುತ್ತಾರೆ. ''**

ಹಿಂದುಸ್ತಾನದ ಜೀವನಾಡಿಯಾದ ಆಧ್ಯಾತ್ಮ ವೃತ್ತಿಯು ಜಾಗ್ರತಗೊಂಡು ಜಗತ್ತಿನ ಎದುರಿಗೆ ಬಂದು ನಿಂತಾಗ ಅದು ಸಮೃದ್ಧಿ ಸಾಮರಸ್ಯಗಳನ್ನು ವಿಪುಲವಾಗಿ ಕೊಡಮಾಡಬಲ್ಲದು. ಜಗತ್ತಿನ ಆಧ್ಯಾತ್ಮಿಕ ಸ್ಥಿತ್ಯಂತರಗಳನ್ನು ಮಾಡಬಲ್ಲ ಶಕ್ತಿಯು ಸನಾತನಧರ್ಮವೊಂದರಲ್ಲಿಯೇ ಇರುವದು. ಆ ಸನಾತನಧರ್ಮವನ್ನು ಹಿಂದುದೇಶವು ಕಾಪಾಡಿಕೊಂಡು ಬಂದಿರುವುದರಿಂದ ಸನಾತನಧರ್ಮಕ್ಕೆ ಹಿಂದುಧರ್ಮವೆನ್ನುತ್ತಾರೆ. ಹಿಂದುಧರ್ಮವು ಹಿಂದುಸ್ತಾನದ ಕ್ಷೇತ್ರವನ್ನು ಮೀರಿ ಜಗತ್ತಿನ ರಂಗಭೂಮಿಯಲ್ಲಿ ಮಾನವ ಏಕತೆಯನ್ನು ಚಿತ್ತರಿಸುವ ಸಾಮರ್ಥ್ಯವನ್ನು ತಳೆಯಬೇಕಾದರೆ ಶ್ರೀ ಅರವಿಂದರು ಕಂಡುಹಿಡಿದ ಪೂರ್ಣ ಯೋಗವು ಕಾರ್ಯಕಾರಿಯಾಗಬೇಕಾಗುತ್ತದೆ. ಪೂರ್ಣ ಯೋಗವು ಮಾತ್ರ ಸಂಪೂರ್ಣ ಜಗತ್ತನ್ನೇ ಪೂರ್ಣತೆಯ ದಾರಿಯಲ್ಲಿ ಕೊಂಡೊಯ್ಯಬಹುದಾಗಿದೆ. ಆದರಿಂದಲೇ ಪರಿಪೂರ್ಣ ಮಾನವನು ಉದಯವಾಗಬಲ್ಲನು. ಪೂರ್ಣ ಯೋಗಿಯು ನೆಲೆನಿಲ್ಲುವ ಸ್ಥಳವು ವಿಜ್ಞಾನ ಅಥವಾ ಅತಿಮಾನಸವೆನಿಸುತ್ತದೆ. ಅಲ್ಲಿ ಮನುಷ್ಯನಿಗೆ ನೆಲೆನಿಲ್ಲುವ ಸಾಧ್ಯವಾದಾಗಲೇ ಮಾನವನ ಸರ್ವ ಮಾರ್ಪಾಡುಗಳು ಸಾಧ್ಯವಾಗುತ್ತದೆ. ಇನ್ನೆಲ್ಲಿಯಿಂದಲೂ ಮಾರ್ಪಾಡು ಸಾಧ್ಯವೇ ಇಲ್ಲವಂತೆ.



# ವಿಜ್ಞಾನದ ಸ್ಥಾನ-ಅತಿಮಾನವನ ಅಂತರ್ಜ್ಞಾನ



ನಮಗಿರುವ ಶರೀರ, ಪ್ರಾಣ, ಮನಗಳು ಕೆಳಗಿನ ಪ್ರಕೃತಿಯೆನಿಸುತ್ತವೆ. ಸತ್, ಚಿತ್, ಆನಂದಗಳು ಮೇಲಿನ ಪ್ರಕೃತಿಯೆನಿಸುತ್ತವೆ. ಇವೆರಡು ಪ್ರಕೃತಿಗಳ ಮಧ್ಯದಲ್ಲಿರುವ ಸ್ಥಾನವೇ ವಿಜ್ಞಾನವೆನಿಸುತ್ತದೆ. ಮೇಲಿನ ಪ್ರಕೃತಿಯೊಳಗಿನ ಸತ್‌ಚಿತ್ ಆನಂದಗಳು ಕೆಳಗಿನ ಪ್ರಕೃತಿಯಲ್ಲಿ ಇಳಿದು ಬಂದು ಸತ್ವ, ರಜ, ತಮೋ ಗುಣಗಳಾಗಿ ಮಾರ್ಪಡುತ್ತವೆ. ಆದರೆ ವಿಜ್ಞಾನದಲ್ಲಿ ಅವು ಜ್ಞಾನ, ಶಕ್ತಿ, ಶಾಂತಿಗಳಾಗುತ್ತವೆ. ಮಾನವನು ಮನಸ್ಸು ಮಾಡಿದರೆ ವಿಜ್ಞಾನ ಸತ್ವವು ಅವನಿಗೆ ದೊರಕೊಳ್ಳುವಂತೆ ಪೂರ್ಣ ಯೋಗವು ಸಾಧಿಸಿಕೊಡುವದು. ಹಾಗೆ ಅದು ಸುಲಭವಾಗುವದಕ್ಕೆ ಪರಮೇಶ್ವರನು ಸಂಕಲ್ಪ ಮಾಡಿದ್ದಾನೆಂದು ಹೇಳುತ್ತಾರೆ. ಈ ಮಾತು ಸ್ಪಷ್ಟವಾಗಬೇಕಾದರೆ ವ್ಯವಹಾರದೊಳಗಿನ ಒಂದು ಮಾತನ್ನು ಉದಾಹರಿಸಬಹುದು.

ನಾಟಕದ ಅಭಿನಯಕಾರರಿಗೆ ಮೂರು ಸ್ಥಳಗಳಿರುತ್ತವಲ್ಲವೇ ? ರಂಗಭೂಮಿ, ಬಣ್ಣದ ಕೋಣೆ, ಇಳಕೊಳ್ಳುವ ಬಿಡಾರ ಇವೇ ಆ ಮೂರು ಸ್ಥಳಗಳು. ಬಿಡಾರದೊಳಗಿಂದ ಹೊರಬಿದ್ದ ನಟವರ್ಗದವರಾದ ಸುಬ್ಬಣ್ಣ, ಲಕ್ಷ್ಮಮ್ಮ, ವೀರಣ್ಣ ಮೊದಲಾದವರು ಬಣ್ಣದ ಕೋಣೆಗೆ ಬರುತ್ತಾರೆ. ಅಲ್ಲಿ ತಾವು ಸುಬ್ಬಣ್ಣ, ಲಕ್ಷ್ಮಮ್ಮ, ವೀರಣ್ಣ ಎಂಬುವ ಎಚ್ಚರಿಕೆಯಲ್ಲಿದ್ದರೂ ಹರಿಶ್ಚಂದ್ರ, ತಾರಾಮತಿ, ವಿಶ್ವಾಮಿತ್ರ ಮೊದಲಾದ ಪಾತ್ರಗಳ ವೇಷ ಧರಿಸುತ್ತಾರೆ. ಹಾಗೆ ವೇಷಾಂತರಿಸುವಾಗ ಅವರು ತಮ್ಮ ನಿತ್ಯದ ಬಟ್ಟೆ ಬರೆಗಳನ್ನು ತೆಗೆದಿಡುವರು. ಪಾತ್ರಕ್ಕೆ ತಕ್ಕುದಾದ ಉಡುಪು ಧರಿಸುವರು. ಬಳಿಕ ರಂಗಭೂಮಿಯನ್ನು ಪ್ರವೇಶಿಸಿ, ತಾವು ಸುಬ್ಬಣ್ಣ, ಲಕ್ಷ್ಮಮ್ಮ, ವೀರಣ್ಣ ಎಂಬುದನ್ನು ಮರೆಯುವರು. ಅಲ್ಲದೆ ಪರಸ್ಪರರೂ ಮರೆಯುವರು. ಆ ಮರವಿನಲ್ಲಿಯೇ ತಮ್ಮ ನಾಟಕವನ್ನು ಅಭಿನಯಿಸುವರು. ಹಾಗೆ ಅಭಿನಯಿಸುವಾಗ ಏನಾದರೂ ಅಸ್ತವ್ಯಸ್ತ

ವಾದರೆ ಅವನ್ನು ತಿದ್ದಿಕೊಳ್ಳುವದಕ್ಕೆ ಬಣ್ಣದ ಕೋಣೆಗೇ ಬರಬೇಕಾಗುತ್ತದೆ. ಅಲ್ಲಿಯೇ ಇಚ್ಛಿತ ಬದಲಾವಣೆಗಳನ್ನು ಮಾಡಿಕೊಳ್ಳಲಿಕ್ಕಾಗುವದು. ತಮ್ಮ ವೇಷವು ಅಸ್ತವ್ಯಸ್ತವಾಯಿತೆಂದು ಯಾವನಾದರೂ ನಟನು ಬಣ್ಣದ ಕೋಣೆಯನ್ನು ಬಿಟ್ಟು ಬಿಡಾರಕ್ಕೆ ಹೋದರೆ ಏನೂ ಪ್ರಯೋಜನವಾಗಲಾರದು. ಬಣ್ಣದ ಕೋಣೆಯಲ್ಲಿರುವ ವರೆಗೆ ತಾವು ಅಭಿನಯಿಸಬೇಕಾದ ಪಾತ್ರದ ಅರಿವೂ ಇರುವದಲ್ಲದೆ, ತಾವು ಬಿಡಾರದಲ್ಲಿದ್ದಾಗ ಕರೆಯಿಸಿಕೊಳ್ಳುವ ಸುಬ್ಬಣ್ಣ-ಲಕ್ಷ್ಮಮ್ಮ-ವೀರಣ್ಣಗಳಿರುವೆನೆಂಬ ಅರಿವೂ ಇರುವದು. ಬಿಡಾರಕ್ಕೆ ಬಂದಾಗ ಆ ಎರಡೂ ಎಚ್ಚರಗಳು ಉಳಿಯಲಾರವು. ಅದರಂತೆ ರಂಗಭೂಮಿಯನ್ನು ಏರಿದಾಗಲೂ ಅವು ಉಳಿಯಲಾರವು.

ಅದೇ ಪ್ರಕಾರ ವಿಜ್ಞಾನದಲ್ಲಿ ಕೆಳಪ್ರಕೃತಿಯ ಎಚ್ಚರ, ಮೇಲಿನ ಪ್ರಕೃತಿಯ ಎಚ್ಚರ ಎರಡೂ ಇರುತ್ತವೆ. ಆ ಎಚ್ಚರುಳ್ಳವನಿಗೆ ಅತಿಮಾನವನೆನ್ನುತ್ತಾರೆ. ಅತಿಮಾನವನ ಎಚ್ಚರಿಕೆ ಅಂತರ್ಜ್ಞಾನವೆನ್ನುತ್ತಾರೆ. ಮ. ಗಾಂಧಿಯವರು ವಿಶೇಷ ಪ್ರಸಂಗದಲ್ಲಿ ಪಡೆಯುತ್ತಿದ್ದ ಪ್ರೇರಣೆಯು ಅಂತರ್ಜ್ಞಾನವೇ ಸರಿ! ಅಂಥ ದಿವ್ಯವಾದ ಅಂತರ್ಜ್ಞಾನದ ಸಂಬಂಧವಿಟ್ಟುಕೊಂಡ ಒಬ್ಬರೇ ಒಬ್ಬರಾದ ಗಾಂಧಿಯವರ ಮುಂದೆ ಯಾವ ಮೇಧಾವಿಯ ಬುದ್ಧಿಯಾದರೂ ಮೊಟಕಾಗಿ ನಿಲ್ಲುತ್ತಿತ್ತು. ಅವರು ಕೈಕೊಂಡ ಕಾರ್ಯವನ್ನು ಎದುರಿಸುವ ಶಕ್ತಿಯೇ ಇರುತ್ತಿರಲಿಲ್ಲ. ಅವರ ದಿವ್ಯ ಉತ್ಸಾಹವು ಶಕ್ತಿಯುತವಾಗಿಯೂ ಪ್ರಭಾವಪೂರಿತವಾಗಿಯೂ ಇರುತ್ತಿತ್ತು. ಈ ಮಾತನ್ನು ಅವರ ಜೀವಿತವನ್ನು ಬಲ್ಲ ನಮಗೆಲ್ಲರಿಗೂ ತಿಳಿದಿದೆ. ಆದರೆ ನಿರಂತರವಾದ ಅಂತರ್ಜ್ಞಾನದ ಸಂಬಂಧವುಳ್ಳ ಅತಿಮಾನವನು ಅದೆಂಥ ಅಸಾಧ್ಯವನ್ನಾದರೂ ಜಗತ್ತಿನಲ್ಲಿ ಮಾಡಿ ತೋರಿಸುವ ತಿಳುವಳಿಕೆಯುಳ್ಳವನೂ ಬಲವುಳ್ಳವನೂ ಆಗಿರಬಲ್ಲನು. ಭಾರತವನ್ನೂ ಜಗತ್ತನ್ನೂ ಮಾರ್ಪಾಡುಗೊಳಿಸುವದಕ್ಕೆ ಶ್ರೀ ಅರವಿಂದರ ಲೆಕ್ಕದಂತೆ ನೂರು ಜನರಾದರೆ ಸಾಕಲ್ಲವೇ? ಹಿಂದುಸ್ತಾನದ ಮಾರ್ಗವನ್ನು ಗೊತ್ತುಹಚ್ಚಲಿಕ್ಕೆ ವಾಸ್ಕೋಡಿಗಾಮನಿಗೆ ಹತ್ತಿದಷ್ಟು ಕಾಲ, ಅವನು ಪಟ್ಟಷ್ಟು ಶ್ರಮ ಇವು ಹಿಂದಿನಿಂದ ಬಂದ ಅಸಂಖ್ಯ ಐರೋಪ್ಯ

ರಿಗೆ ಹತ್ತಿದವೇ ? ಅವರಿಗೆ ಆ ಮಾರ್ಗವು ರಹದಾರಿಯಾಗಿಬಿಡಲಿಲ್ಲವೇ ? ವಿಜ್ಞಾನ ಸಿದ್ಧಿಯು ಇನ್ನು ಜಗತ್ತಿಗೆ ಸುಲಭವಾದ ರಹದಾರಿಯಂತಾಗುವುದರಲ್ಲಿದೆ. ವಿಜ್ಞಾನ ಸಿದ್ಧಿಯ ಶಾಸ್ತ್ರವನ್ನು ಅರಿತು, ಅದರಲ್ಲಿ ಮುಂದುವರಿದವರೆನಿಸುವ ಗುರುವಿನ ಸಹಾಯ ಪಡೆದು, ಹತ್ತಿದಷ್ಟು ಕಾಲಕಳೆಯುವ ನಿಶ್ಚಯಮಾಡಿ, ಅದೆಷ್ಟು ಸುತ್ತುವರಿದರೂ ಗುರಿಯನ್ನು ತಲಪುವೆನೆಂಬ ಉತ್ಸಾಹತಳೆದಿರಬೇಕು. ಈ ಶಾಸ್ತ್ರ, ಗುರು, ಕಾಲ, ಉತ್ಸಾಹ ಇವುಗಳಿಗೆ ಸಾಧನ ಚತುಷ್ಟಯವೆನ್ನುತ್ತಾರೆ.

ಈಗ ಜಗತ್ತಿನಲ್ಲಿ ಎಲ್ಲಕ್ಕೂ ಹೆಚ್ಚಿನ ದೈವೀಪ್ರಕಟನೆಯೆಂದರೆ ಮಾನವ. ಮಾನವನಿಗೆ ಮನ ಅಥವಾ ಬುದ್ಧಿಯೇ ಲಕ್ಷಣವಾಗಿದೆ. ಈ ಮಾನವನು ಅದೆಷ್ಟೋ ಸಾವಿರ ವರುಷಗಳ ಹಿಂದೆ ಮಂಗನಿಂದ ಮಾರ್ಪಾಡು ಹೊಂದಿ ಈ ಸ್ವರೂಪವನ್ನು ಧರಿಸಿದ್ದಾನೆ. ಮಂಗನಿಂದ ಮನುಷ್ಯನಾಗುವ ಸಂಧಿಯು ಒಂದು ಮನ್ವಂತರವೆನಿಸಿಕೊಂಡಿತು. ಈಗ ಸಹ ಅಂಥ ಮನ್ವಂತರದ ಕಾಲವು ಬಂದು ಬಾಗಿಲಿಗೆ ನಿಂತಿದೆ. ಮಂಗನು ಒಂದಾನೊಂದು ಕಾಲಕ್ಕೆ ಎಲ್ಲಕ್ಕೂ ಹೆಚ್ಚಿನ ಪ್ರಕಟನೆಯೆನಿಸಿತ್ತು. ಮಂಗನಿಗೆ ಚಾಪಲ್ಯವೂ ಉತ್ಸಾಹವೂ ಅದರ ಲಕ್ಷಣಗಳಾಗಿದ್ದವು. ಮಂಗನಿಗಿಂತ ಮುಂದಿನದಾದ ಮನುಷ್ಯ ಪ್ರಕಟನೆಯಾಗುವಾಗ ಮಂಗನ ಲಕ್ಷಣಗಳಾದ ಚಪಲತೆಯೂ ಉತ್ಸಾಹವೂ ಉಡುಗಿಹೋದವು. ಅಲ್ಲದೆ ಪ್ರಕಟಗೊಂಡ ಮನುಷ್ಯನಲ್ಲಿ ಮನ ಅಥವಾ ಬುದ್ಧಿಯೊಂದು ಹೊಸ ಲಕ್ಷಣವಾಗಿ ಸೇರ್ಪಡೆ ಹೊಂದಿತು. ಅದ್ದರಿಂದ ಎಲ್ಲಕ್ಕೂ ಹೆಚ್ಚಿನ ಪ್ರಕಟನೆಯಾದ ಮನುಷ್ಯನಲ್ಲಿ ಬುದ್ಧಿ ಅಥವಾ ಮನವು ಮುಖ್ಯ ಲಕ್ಷಣವಾಗಿ, ಮಂಗನ ಚಪಲತೆ ಉತ್ಸಾಹಗಳು ಕಡಿಮೆ ಆದವು. ಅಥವಾ ಕಾಣದಂತಾದವು. ಅದರಂತೆ ಈಗ ಬಂದ ಮನ್ವಂತರದಲ್ಲಿ ಮನುಷ್ಯನಿಗಿಂತಲೂ ಹೆಚ್ಚಿನ ಪ್ರಕಟನೆಯಾದ ಅತಿಮಾನವನು ಮೈದೋರಲಿದ್ದಾನೆ. ಮನುಷ್ಯನು ಮೈದೋರಲಿದ್ದಾಗ ಮಂಗನಲ್ಲಿದ್ದ ಚಪಲತೆ ಉತ್ಸಾಹಗಳು ಉಡುಗಿ ಮನವು ಹೊಸ ಕೊಡುಗೆಯಾಯಿತಲ್ಲವೇ ? ಹಾಗೆಯೇ ಈಗ ಅತಿಮಾನವನು ಮೈದೋರಲಿರುವುದರಿಂದ ಅತನಿಗೆ ಅಂತರ್ಜ್ಞಾನವು

ಹೊಸ ಕೊಡುಗೆಯಾಗಿ ಅತಿ ಬುದ್ಧಿಯು ಉಡುಗಿಹೋಗಲಿರುವದಂತೆ. **“ತನ್ನನ್ನೂ ಅನ್ಯರನ್ನೂ ಮೋಸಕ್ಕೀಡುಮಾಡುವ ಅತಿಬುದ್ಧಿ”** ಯೆಂದು ಶ್ರೀ ಅರವಿಂದರು ಅದನ್ನು ವಿಶೇಷ ಶಬ್ದಗಳಿಂದ ವರ್ಣಿಸಿದ್ದಾರೆ. ಅಂತರ್ಜ್ಞಾನದ ಬೆಳಕು ಬೆಳಗಿದಂತೆ ತನ್ನನ್ನೂ ಅನ್ಯರನ್ನೂ ಮೋಸಕ್ಕೀಡುಮಾಡುವ ಬುದ್ಧಿಯ ಹೊಳಪು ಕಡಿಮೆಯಾದರೆ ಜಗತ್ತಿನ ಗೊಂದಲಗಳು ತಾವಾಗಿಯೇ ಕಡಿಮೆ ಆಗುವವು. ಇಲ್ಲವೆ ಬರಬರುತ್ತ ಇಲ್ಲವಾಗುವವು. ಆಗ ಜಗತ್ತಿನ ಗುರಿಯಾದ ಏಕತೆಯು ಸಹಜವಾಗಿ ಸಾಧಿಸುವದು. ರಂಗಭೂಮಿಯಲ್ಲಿ ಬಡಿದಾಟದ ರಾಮರಾವಣರ ಪಾತ್ರಧಾರಿಗಳು ಬಣ್ಣದ ಕೋಣೆಗೆ ಬಂದ ಮೇಲೆ ಬಡಿದಾಡಲಾರರು. ತಿರುಗಿ ಕೇಳಿದರೆ ತಂತಮ್ಮ ಅಭಿನಯಗಳನ್ನು ನೆನೆದು ಕೈಕುಲುಕಿಸಿ ನಗುವರು. ಆಗ ಈರ್ಷೆ ಎಲ್ಲಿ-ಅಸೂಯೆ ಎಲ್ಲಿ? ಎಲ್ಲವೂ ಆಟ, ಆನಂದದ ಲೀಲೆ. ಅಂಥ ಜ್ಞಾನವು ಸಾಮಾನ್ಯವಾಗುವದಕ್ಕೆ ಅಂತರ್ಜ್ಞಾನವು ಸಹಜವಾಗಬೇಕಾಗುತ್ತದೆ. ಅಂತರ್ಜ್ಞಾನವೆಂದರೆ ಮ. ಗಾಂಧಿ ಅವರಿಗೆ ವಿಶೇಷ ಪ್ರಸಂಗದಲ್ಲಿ ಪ್ರೇರಣೆ ಕೊಡುವ ಜ್ಞಾನವೆಂದು ಹಿಂದೆ ಹೇಳಿದೆ. ನಮಗೆಲ್ಲರಿಗೆ ಅದರ ಅನುಭವವಿದ್ದಿರಲಾರದು. ಆದರೆ ಕಿಕ್ಕಿರಿದು ನೆರೆದ ಸಂತೆಯಲ್ಲಿ ಗ್ರಾಹಕರಾಗಲಿ ವ್ಯಾಪಾರಿಗಳಾಗಲಿ ಆಗಿಹೋದ ಅನುಭವ ಮಾತ್ರ ನಮಗೆಲ್ಲರಿಗೂ ಇದುತ್ತದೆ. ಸಂತೆಯೊಳಗಿನ ದಶಸಾವಿರ ಜನರ ಗಲಬಿಲಿಯ ಒಂದು ಶಬ್ದವೂ ಕೇಳಿಸದೆ, ವ್ಯಾಪಾರಿಗೆ ಗ್ರಾಹಕನ ಮಾತೂ ಗ್ರಾಹಕನಿಗೆ ವ್ಯಾಪಾರಿಯ ಮಾತೂ ಮಾತ್ರ ಕೇಳಿಸುತ್ತದೆಂಬುದನ್ನು ಮಾತ್ರ ಬಲ್ಲೆವು. ಅದಕ್ಕೇ ಅಂತರ್ವಾಣಿಯೆನ್ನಬಹುದಾಗಿದೆ. ಆ ವಾಣಿಯಲ್ಲಿ ಮೂಡಿದ ವಿಚಾರಕ್ಕೆ ಅಂತರ್ಜ್ಞಾನವೆನ್ನಬಹುದಾಗಿದೆ. ಅಂಥ ಅಂತರ್ವಾಣಿಯನ್ನು ಕೇಳುವುದಕ್ಕೂ ಆ ವಿಚಾರದಂತೆ ಆಚರಿಸುವುದಕ್ಕೂ ಬಹಳ ರೂಢಿಬೇಕಾಗುತ್ತದೆ. ಆದ್ದರಿಂದ ಆರಂಭಕ್ಕೆ ಸಣ್ಣಪ್ರಶ್ನೆಗಳಿಗೆ ಉತ್ತರವೆಂದು ಅಂತರ್ವಾಣಿಯನ್ನು ಪಡೆಯಬೇಕೆಂದೂ ಹಾಗೆ ಪಡೆದ ವಿಚಾರದಂತೆ ನಡೆದೇತೀರಬೇಕೆಂದೂ ಹೇಳುತ್ತಾರೆ. ನಡೆಯಲು ಅನುಕೂಲವಾಗು

ವಂತೆ ಸುಲಭಪ್ರಶ್ನೆಗಳಿಗೆ ಆರಂಭದಲ್ಲಿ ಉತ್ತರಬಯಸಬೇಕೆನ್ನುತ್ತಾರೆ. ಆ ವಿಚಾರದಂತೆ ಆಚರಿಸಲು ಅಸಮರ್ಥನಾದವನಿಗೆ, ಅಂತರ್ವಾಣಿಯು ಉಸುರುವ ತನ್ನ ಕೆಲಸವನ್ನು ಕಟ್ಟುವಮಾಡಿ ಬಿಡಬಹುದಾಗಿದೆ.

---

## ಭಾರತಕ್ಕೆ ಸ್ವರಾಜ್ಯ ದೊರೆತುದೇತಕ್ಕೆ?



ಅಂತರ್ವಾಣಿಯನ್ನು ಸುಲಭವಾಗಿ ಆಲಿಸಿ ಆಚರಿಸುವ ಸಾಮರ್ಥ್ಯವುಳ್ಳ ಅತಿಮಾನವರು ಶ್ರೀ ಅರವಿಂದರ ಪೂರ್ಣಯೋಗದ ಸಾಧನದಲ್ಲಿ ಸಾಕಷ್ಟು ಕಾಣಿಸಿಕೊಳ್ಳುವರೆಂದು ತಿಳಿದೆವು ಅದರಿಂದ ಸತ್ಯಯುಗದ ಶಾಂತಿ- ಸಮೃದ್ಧಿಗಳು ನೆಲೆಸುವವೆಂದು ಗೊತ್ತಾಯಿತು. ಮಾನವ ಕೋಟಿಗೆಲ್ಲ ಅವು ಕೈಗೂಡಬೇಕಾದರೆ ಆತ್ಮಜಾಗ್ರತರಾದ ಜನರು ಬೇಕೆಂದು ಮನವರಿಕೆಯಾಯಿತು. ಅಂಥವರು ಮಾತ್ರ ಜಾಗತಿಕಕಾರ್ಯಕ್ಕೆ ಕೈಹಾಕಲು ಸಮರ್ಥರೆಂದು ಗಟ್ಟಿಯಾಯಿತು. ಅಧ್ಯಾತ್ಮವು ಭಾರತದ ಜೀವಕಳೆಯಾಗಿರುವುದರಿಂದ ಆತ್ಮಜಾಗ್ರತಿಯ ಕಾರ್ಯವು ಅಲ್ಲಿಯೇ ಹುಲುಸಾಗಿ ಬೆಳೆಯಬಲ್ಲದೆಂದು ನಿರ್ಧಾರವಾಯಿತು. ಅಂಥಕೃಷಿ ನಡೆಸುವದಕ್ಕೆ ಭಾರತವು ಸ್ವತಂತ್ರವಾಗುವುದರ ಅವಶ್ಯಕತೆಯಿತ್ತೆಂದು ತೋರಿಬಂದಿತು. ಭಾರತದ ಸ್ವಾತಂತ್ರ್ಯವು ಅದರ ಆತ್ಮಜಾಗ್ರತಿಯಿಂದ ಮಾತ್ರ ಸಾಧ್ಯವಾಯಿತೆಂದು ಅರಿತೆವು. ಭಾರತವು ತನ್ನ ಅವನತಿಯ ಕಾಲದಲ್ಲಿ ಶಕ್ತಿಸಂಗ್ರಹ ಕಾರ್ಯದಲ್ಲಿ ತೊಡಗಿದ್ದು ಈಗದನ್ನು ಜಾಗತಿಕ ಕಾರ್ಯಕ್ಕೆ ವಿನಿಯೋಗಿಸಬಲ್ಲದೆಂಬುದನ್ನು ಈ ವರೆಗಿನ ವಿವರಣೆಯಿಂದ ಮನದಟ್ಟಾಯಿತು. ಆದ್ದರಿಂದ ಇನ್ನುಮೇಲೆ, ಭಾರತಕ್ಕೆ ಸ್ವರಾಜ್ಯ ದೊರೆತುದೇತಕ್ಕೆ ಎಂಬ ಪ್ರಶ್ನೆಯು ಉಳಿಯಲಿಲ್ಲ.

ಭಾರತಸ್ವಾತಂತ್ರ್ಯದಿಂದ ಜಗತ್ತಿಗೆ ಯಾವ ಮಹಾಪ್ರಯೋಜನವಾಗುತ್ತದೆಯೆಂಬುದನ್ನು ಹೆಚ್ಚಾಗಿ ಶ್ರೀ ಅರವಿಂದರ ಯೋಗೀಶ್ವರರು ತಮ್ಮ ದಿವ್ಯದೃಷ್ಟಿಯಿಂದ ಕಂಡು ಉಸುರಿದ ಮಾತುಗಳನ್ನು ಇಲ್ಲಿ ಹೆಚ್ಚಾಗಿ ವಿವರಿಸಲಾಗಿದೆ. ಆ ಮಹಾಪ್ರಯೋಜನದಲ್ಲಿ ನಮ್ಮ ಜೀವಿತವೂ ಭಾಗಿಯಾಗಬೇಕೆಂಬ ಆಶೆಯು ಅಂಕುರಿಸದಿರಲಾರದು. ಅಂಥದೊಂದು ಕ್ಷುದ್ರವಾದ ಆಶೆ ಅಂಕುರಿಸಿದರೂ ಭಾರತಕ್ಕೆ ಸ್ವರಾಜ್ಯದೊರೆತುದು ಅದಕ್ಕಾಗಿಯೇ ಎಂದು ಹೇಳಿಕೊಳ್ಳಲಿಕ್ಕೆ ಹಾದಿಯಾಗುತ್ತದೆ.





ಇವರೇ ಶ್ರೀ ಸಿಂಪಿ ಲಿಂಗಣ್ಣನವರು. ಚಡಚಣದಲ್ಲಿ ಪ್ರಾಥಮಿಕ ಶಾಲೆಯ ಶಿಕ್ಷಕರಾಗಿರುವರು. ಮಕ್ಕಳ ಮೈ ಮನಸ್ಸು ಹೃದಯಗಳನ್ನು ವಿಕಾಸಗೊಳಿಸುವದರಲ್ಲಿ ಚನ್ನಾಗಿ ಪಳಗಿದ್ದಾರೆ.

ದಿನದ ದುಡಿತದ ದಣಿವು ನಿವಾರಣೆಗಾಗಿ ಮತ್ತು ತಮ್ಮ ಅಂತರಂಗ ವ್ಯಕ್ತಿತ್ವದ ಪೋಷಣೆಗಾಗಿ ತತ್ವಾಭ್ಯಾಸವನ್ನು ಮೌನವಾಗಿ ಸದ್ದಿಲ್ಲದೇ ಸಾಗಿಸಿದ್ದಾರೆ. ಇವರ ನುಡಿ ಮಧುರ. ಭಾಷೆ ಬಲು ಹಗುರು. ದೊಡ್ಡ ವಿಚಾರಗಳನ್ನು ಬಹು ಸುಲಭವಾಗಿ ಹೇಳುವ ಕಲೆ ಸಾಧಿಸಿರುವರು.

ಬೇರೆ ಬೇರೆ ವಿಷಯಗಳ ಬಗೆಗೆ ಮೂವತ್ತು ಪುಸ್ತಕಗಳನ್ನು ಬರೆದಿರುವರು. ಪ್ರತಿಯೊಂದು ಪುಸ್ತಕದಲ್ಲಿಯೂ ಹೊಸ ವಿಚಾರಗಳಿವೆ. ರಾಷ್ಟ್ರ, ಧರ್ಮ, ಸಮಾಜ, ಶಿಕ್ಷಣ, ಯೋಗ, ಸಾಹಿತ್ಯ ಇತ್ಯಾದಿ ಈ ಎಲ್ಲವೂ ಅವರ ಸಾಹಿತ್ಯದಲ್ಲಿ ಸುಂದರವಾಗಿ ಮೂಡಿವೆ.

ಪಾಂಡಿಚೇರಿಯ ಶ್ರೀ ಅರವಿಂದ ಮಹರ್ಷಿ ಹಾಗೂ ಶ್ರೀ ಮಾತಾಜಿಯವರಲ್ಲಿ ಇವರಿಗೆ ಅಪಾರ ಭಕ್ತಿ ಇದೆ. ಬಿಡುವಿನ ಸಮಯದಲ್ಲಿ ಸೇವೆಗಾಗಿ ಹಾಗೂ ದರ್ಶನಕ್ಕಾಗಿ ಹೋಗಿಬರುತ್ತಲೂ ಇದ್ದಾರೆ.

ಸಮಾಜ ಶಿಕ್ಷಣ ಸಾಹಿತ್ಯ ಪ್ರಕಟನೆಯಲ್ಲಿ ನಮಗಾಗಿ ಇವರು ಇನ್ನೂ ಬರೆಯಲಿರುವರು. ರಾಷ್ಟ್ರೀಯ ವಿಚಾರಗಳನ್ನು ಇವರಿಂದ ತಿಳಕೊಳ್ಳುವಕಾಲ ಬೇಗ ಬೇಗ ಬರಲಿ.

**ಸಂಪಾದಕ.**

# ಮಾರಾಟಕ್ಕೆ ಸಿದ್ಧವಿರುವ
## ಸಿಂಪಿ ಲಿಂಗಣ್ಣನವರ ಕೃತಿಗಳು

೧. ಶ್ರೀಅರವಿಂದರು ( ಚರಿತ್ರ ) .. .. ೧-೧೨-೦
೨. ಧರ್ಮ ಹಾಗೂ ರಾಷ್ಟ್ರೀಯತ್ವ (ಶ್ರೀಅರವಿಂದರ ೨೦ ಪ್ರಬಂಧಗಳು) ೧—೮—೦
೩. ಶ್ರೀಅರವಿಂದರ ಪತ್ರಗಳು ( ಧರ್ಮಪತ್ನಿಯವರಿಗೂ ತಮ್ಮನಿಗೂ ಬರೆದವು ) ೦—೮—೦
೪. ಯೋಗದೀಕ್ಷೆ ( ಶ್ರೀಅನಿಲಬರಣರಾಯರು ಆಶ್ರಮದೊಡನೆ ನಡೆಸಿದ ಯೋಗಜಿಜ್ಞಾಸೆಯ ಪತ್ರವ್ಯವಹಾರ) ೧—೦—೦
೫. ಉತ್ತರಪಾಡಾ ಉಪನ್ಯಾಸ ( ಶ್ರೀ ಅರವಿಂದರು ) . ೦—೬—೦
೬. ಧರ್ಮಕ್ಷೇತ್ರೇ ಕುರುಕ್ಷೇತ್ರೇ ( ಯುದ್ಧದ ಬಗ್ಗೆ ಶ್ರೀ ಅರವಿಂದರ ವಿಚಾರಗಳು ) ೦—೮—೦
೭. ಮುಗಿಲಜೇನು ( ಕವನ ಸಂಗ್ರಹ ) .. . ೧—೮—೦
೮. ಪೂಜಾ ( ಗದ್ಯಗೀತಗಳು ) ... . ೦-೧೨-೦
೯. ಭಕ್ತರಾಜ ಬಸವಣ್ಣ ( ಬಸವಣ್ಣನವರ ಅಂತರಂಗಜೀವನ ) ೦-೧೨-೦
೧೦. ಸ್ವರ್ಗದೋಲೆಗಳು ( ಗತಿಸಿದ ಕರ್ನಾಟಕ ಮಹಾಪುರುಷರು ಇಂದಿನ ಕನ್ನಡಿಗರಿಗೆ ಕಳಿಸಿದ ಸಂದೇಶ ) ೧—೮—೦
೧೧. ಭಾರತದ ಭವ್ಯಸಿದ್ಧತೆ ( ಶ್ರೀ ಅರವಿಂದರ ವಿಚಾರ ದೃಷ್ಟಿಯಲ್ಲಿ ಇತಿಹಾಸ ನಿರೀಕ್ಷಣೆ ) ೧—೦—೦
೧೨. ಜೀವನ ದೃಷ್ಟಿ (ವಿವಿಧ ಪ್ರಬಂಧಗಳು ) .. ೧—೨—೦
೧೩. ಬೆಟ್ಟದಹೊಳೆ ( ಆದರ್ಶವಾದದ ಕಾದಂಬರಿ ) .. ೧—೪—೦
೧೪. ದತ್ತಸಾಹಿತ್ಯ ( ಶ್ರೀ ಬೇಂದ್ರೆಯವರ ಸಾಹಿತ್ಯಪರಿಚಯ ) ೧—೮—೦
೧೫. ಪವಿತ್ರ ಜೀವನ ( ಟಾಲಸ್ಟಾಯರ ಆರು ಕಥೆಗಳು ) ... ೧—೮—೦
೧೬. ಹಳ್ಳಿಯ ಮಹಾತ್ಮ (ಆದರ್ಶ ಶಿಕ್ಷಕರೊಬ್ಬರ ಜೀವನ ) ೧—೦—೦
೧೭. ಸುಂದರ ಕಥೆಗಳು ( ಶ್ರೀ ತಾಯಿಯವರು ಹೇಳಿದವು ಅಚ್ಚಿನಲ್ಲಿ ) ೧—೪—೦
೧೮. ಪೂರ್ಣಯೋಗ ( ಶ್ರೀ ನಲಿನಿಯವರ ಪುಸ್ತಕದ ರೂಪಾಂತರ ಅಚ್ಚಿನಲ್ಲಿ ) ೧—೦—೦
೧೯. ಮಾತೃವಚನ ( ಕವನರೂಪದಲ್ಲಿ.. ಅಚ್ಚಿನಲ್ಲಿ ) .. ೧—೦—೦

**ಶ್ರೀ ಅರವಿಂದ ಗ್ರಂಥಾಲಯ**

**ಚಡಚಣ ಜಿ. ವಿಜಾಪುರ**

# S. R. S. ದಿಲ್ಲಿ ರೆಡಿಮೇಡ!

[ ರಜಿಸ್ಟರ್ಡ ಟ್ರೇಡಮಾರ್ಕ ]

ಮೈಕಟ್ಟಿಗೆ ಒಪ್ಪುವಂತಹ ಸುಂದರವಾದ ನಯುವಾ-
ಡ್ರೆಸ್ಸುಗಳ ತಯಾರಿಕೆ!




**ಮಜಬೂತ ಹೊಲಿಗೆ!**



**ಬಹುದಿನದ ಬಾಳಿಕೆ!**



**ಯೋಗ್ಯ ಬೆಲೆ!**



**ಗಿರಾಕಿಗಳ ತೃಪ್ತಿ!**

## ಬಳಕೆಗಾರರೆಲ್ಲರೂ ತೃಪ್ತರಾಗುವದೇ ನಮ್ಮ ಗುರಿ!

ಬಿನ್ನಿ. ಅರವಿಂದ. ಕೆಲಿಕೋ, ಫಾಯಿನ್, ಸೂಪರಫಾಯಿನ್ ಮೀಡಿಯಮ್ ಈ ಯಾವತ್ತೂ ಅರಿವೆಗಳಿಂದ ತಯಾರಿ ಡ್ರೆಸ್ಸುಗಳು ನಮ್ಮ ಸಂಗ್ರಹದಿಂದ ಯೋಗ್ಯಬೆಲೆಗೆ ದೊರೆಯುತ್ತವೆ

**ನಿಮ್ಮ ಪ್ರೇಮಕ್ಕೂ ಹಾಗೂ ಸಹಕಾರಕ್ಕೂ ಪಾತ್ರವಾದದ್ದೇ**

# ದಿಲ್ಲಿ ರೆಡಿಮೇಡ, ಗದಗ

ಈ ಪುಸ್ತಕವನ್ನು ಹನಮಂತಗೌಡ ಸಂಕನಗೌಡ ಸಂದಿಗೌಡ್ರ ಇವರು ತಮ್ಮ ಗದುಗಿನ ಶಂಕರನಾರಾಯಣ ಪ್ರೆಸ್ಸಿನಲ್ಲಿ ಮುದ್ರಿಸಿದರು.
ಆಝಾದ ಹಿಂದ ಸೇವಾ ಸಂಘ, ಗದಗ-ಬೆಟಗೇರಿ ಇವರು